ಸ್ವರ್ಗೀಯ ಡಾ. ಸವಣೂರ ಅವರ ಸ್ಮರಣಾರ್ಥ

# ದಿವ್ಯೌಷಧಿ

( ಪೂರ್ವಾರ್ಧ )

ಸಂಪಾದಕರು:

ವೈದ್ಯ:- ಬುರ್ಲಿ ಮಧ್ವಾಚಾರ್ಯರು.

ಹಳ್ಳಿಯ ವೈದ್ಯ, ಸುಲಭ ಔಷಧಿ ಸಂಗ್ರಹ, ಆಯುರ್ವೇದಿಯ ಪ್ರಥಮ ಚಿಕಿತ್ಸೆ, ಶತಶ್ಲೋಕಿ ಮೊದಲಾದವುಗಳ ಲೇಖಕರು.

೧೯೫೫

ಆಯುರ್ವೇದ ಸೇವಾಕುಟಿ ಪ್ರಕಾಶನ,

ಬಾಗಲಕೋಟೆ.

ಪ್ರಕಾಶಕರು:
ವೈದ್ಯ- ಮು. ನಾ. ಬುರ್ಲಿ
ಆಯುರ್ವೇದ ಸೇವಾಕುಟಿ,
ಬಾಗಲಕೋಟ

ಪ್ರಥಮ ಮುದ್ರಣ ಒಂದು ಸಾವಿರ ಪ್ರತಿಗಳು


**ಬೆಲೆ: ರೂ. ೨—೦—೦**

ಮುದ್ರಕರು:
ಸಿ. ಎಮ್. ಸಕ್ರೋಜಿ,
B.A. (Hons)
ಸಕ್ರೋಜಿ ಪ್ರಿಂಟಿಂಗ ವರ್ಕ್ಸ್,
ಬಾಗಲಕೋಟ

ಶ್ರೀ.

# ಮುಡಿಪು

ನನ್ನ ಗುರುಗಳಾದ ದಿವಂಗತ

**ಭಿಷಗ್ರತ್ನ ಗುಂಡಾಚಾರ್ಯ ಹೆರಕಲ್ಲ.**

**ಅವರಿಗೆ ಕೃತಜ್ಞತೆಯಿಂದ ಈ ಅಲ್ಪ**

**ಕೃತಿಯನ್ನು ಅರ್ಪಿಸಿರುವೆ.**

ವಿನೀತ ಛಾತ್ರಃ

**ಬುರ್ಲಿ ಮದ್ವಾಚಾರ್ಯ:**

ಆಯುರ್ವೇದ ಸೇವಾಕುಟಿ,
ಬಾಗಲಕೋಟೆ.

ಕಾರ್ತಿಕ ವದ್ಯ ೮,
ಜಯಸಂವತ್ಸರ.

ಶ್ರೀಶಃ ಶರಣಮ್

# ಡಾ. ಸ ವ ಣೂ ರ

## ಮಹೋದಾರಾಣಾಂ ಗುಣಗೌರವಮ್.

ಪೀಯೂಷಾಶನತೊ ನಿರಾಮಯಬಲೋತ್ಸಾಹೇಷು ದೇವೇಷ್ವಲಮ್।
ಸ್ವರ್ಗೇ ಸ್ವೀಯನಿರುದ್ಯಮತ್ವನಿರಸೌ ಲೋಕೋಪಕಾರೋತ್ಸುಕೌ॥
ಏಕಂ ಶ್ರೀಸವನೂರಸಾಧು ಹನುಮದ್ರೂಪಂ ದಧಾನೌ ಕ್ಷಿತೌ।
ಸ್ವೈರ್ವೈದ್ಯಾವಗದೈಃಸುಧಾರಸಕಣೈಃ ಶಾಂತಿಂ ವ್ಯಧತ್ತಾಂ ರುಜಾಮ್
॥೧॥

ಆಯುರ್ವೇದಮಹೋಪಕಾರಕಮಹಾತಂತ್ರಂ ಕಲೇಃ ಕಾಲತಃ ।
ಪ್ರಾಜ್ಞಂಮನ್ಯಭಿಷಕ್ಪದೈರ್ಬಹುತರಂ ವ್ಯತ್ಯಸ್ತಮಸ್ತಾದರಮ್ ॥
ಪ್ರಾಕ್ ಸ್ವೇನೈವ ವಿನಿರ್ಮಿತಂ ಪುನರಪಿ ಪ್ರೋದ್ಧರ್ತುಕಾಮಃ ಕಿಮಾ-।
-ವಿರ್ಭೂತಃ ಸವನೂರಸಾಧು ಹನುಮದ್ರೂಪೇಣ ಧನ್ವಂತರಿಃ ॥೨॥

ತ್ರೇತಾಯಾಂ ತ್ರಿದಶಾರಿಶಸ್ತ್ರನಿಹತಂ ಶ್ರೀಲಕ್ಷ್ಮಣಂ ವಾನರಾನ್ ।
ದ್ರಾಕ್ ಸಂಜೀವಯಿತುಂ ಗಿರೀಶಶಿಖರಂ ಸಂಜೀವನಾದ್ಯೌಷಧಮ್॥
ನೀತಂ ಯೇನ ಪುನಸ್ತದೋಷಧಿಗುಣ ಪ್ರಖ್ಯಾಪನಾಯಾವನೌ ।
ಜಾತಃ ಶ್ರೀಸವನೂರಸಾಧು ಹನುಮದ್ರೂಪೋ ಹನೂಮಾನ್ ಸ ಕಿಮ್
॥೩॥

ಲೋಕಾರ್ತಿ ಪ್ರದರೋಗರಾಕ್ಷಸಗಣಧ್ವಂಸಾಯ ದಿವ್ಯೌಷಧೀ- ।
-ರ್ಹೃತ್ವಾ ಪೂತಹವೀಂಷಿ ನಿತ್ಯಸವನೈರ್ಧನ್ವಂತರಿಂ ದೇವತಾಮ್॥
ಆರಾಧ್ಯಾಖಿಲಲೋಕಶಾಂತಿಮಕರೋನ್ನಿಸ್ವಾರ್ಥಲೇಶಂ ಕೃಪಾ- ।
-ಸಿಂಧುಃ ಶ್ರೀಸವನೂರಸಾರ್ಥಕನಿಜೋಪಾಖ್ಯೋ ಭಿಷಗ್ಭೂಪತಿಃ
॥೪॥

ಆಯುರ್ವೇದಸಮುನ್ನತಿಪ್ರವಣಧೀಃ ಪಾಶ್ಚಾತ್ಯವೈದ್ಯಾಗ್ರಣೀಃ ।
ದೀನಾರ್ತಿಪ್ರಶಮಾಯ ಭೂರಿಕರುಣಃ ಸತ್ಕೀರ್ತಿಮಾತ್ರಾಯಭಾಕ್ ॥
ಸರ್ವಾಯುರ್ವ್ಯಯಮಾತನೋದ್ಧನಚಯೋ ವೀತಸ್ಪೃಹಃ ಸಂತತಂ ।
ಧನ್ಯಶ್ರೀಸವನೂರಸಾಧುಹನುಮಾನ್ ಮಾನ್ಯಶ್ಚ ಸರ್ವೈರ್ಜನೈಃ ॥೫॥

| | |
|---|---|
| **ಬೆಳಗಾಂವಿ.**<br>ಚೈ ಶು. ೧ ಶಕೆ ೧೮೭೬<br>ಜಯಸಂವತ್ಸರ. | **ಸಾಹಿತ್ಯರತ್ನ ಗಲಗಲೀ ರಾಮಾಚಾರ್ಯಃ**<br>ಮಧುರವಾಣೀ ಸಂಪಾದಕಃ |

---

*Dr. B. S. JIRGE,* **BELGAUM.**
M R.C S (England)
L.R C P.(London)

## AN APPRECIATION.

Dr. Savanur, one of the oldest practitioners of Belgaum, was a figure worthy of note at his time. He practiced the art of healing and he did this, with such skill and zeal that he was almost worshipped by.... Belgaumites and people round about. His word was considered the last that could be said on the art of healing. His was a plain living and high thinking. He made no difference between the rich and poor. A call to duty always spurred him in and out of Belgaum even at the cost of his personal comforts and irrespective of monitary gains. The richest and even the poorest had the same easy access to him. Many took mean advantage of his generous nature but he gave it ungrudgingly and always responded to the ever increasing calls, with all the skill and will, at his command, no matter whether noon or night, rain or shine. The same healing touch, the same soothing words and the very personal care he gave to his ailing brothren

oblivious of the monitary gains or his personal comforts. He was always calm, composed and a tower of strenth to others in times of difficulties. Thousand and odd questions from nervous patients never irritated him even once. He always passified them with soothing words. Such patience is hard to find. He took keen interest in Ayurved and to give the benfit to his collegues, wrote books explaining Ayurvedic principles as well.

This great healer has passed away leaving all of us, all the poorer for it. May his soul rest in peace.

**B S Jirge,**
1st April, 1954.

---

ಶ್ರೀ.

ಮಹಾತ್ಮನಾಮ್ ಶುಭಾಶೀರ್ವಾದಾಃ

**ಭಾರತರಾಷ್ಟ್ರಪತಿ ಚಿಕಿತ್ಸಕ**

# ಪಂ. ಸತ್ಯನಾರಾಯಣ ಶಾಸ್ತ್ರೀ ವೈದ್ಯ.

ಭಿಷಕ್ ಶಿರೋಮಣಿ, ಭೂ.ಪೂ. ಪ್ರಿನ್ಸಿಪಾಲ ಆಯುರ್ವೇದಿಕ್ ಕಾಲೇಜ
ಡೀನ ಆಪ್ ದೀ ಫಾಕಲ್ಟಿ ಆಫ್ ಆಯುರ್ವೇದ,ತಥಾಯುನಿವ್ಹರ್ಸಿಟಿ
ಪ್ರೊಫೇಸರ ಕಾಶಿ ಹಿಂದೂ ವಿಶ್ವವಿದ್ಯಾಲಯ.

**ಅಗಸ್ತ್ಯಕುಂಡ ಕಾಶಿ.**
ದಿನಾಂಕ, ೨೪ಫರವರಿ ೧೯೫೪.

ಮಧ್ವಾಚಾರ್ಯ ಪದಾಭಿಧೈಶ್ಚ ಬುರಲೀ ಪ್ರೋಪಾಪ್ತ ವಿದ್ವದ್ವರೈಃ
ಲೋಕಾನಾಮುಪಕಾರಕೋ ವಿರಚಿತೋ ಗ್ರಂಥೋ ಹಿ ವರ್ವರ್ತ್ಯಲಮ್
ಪೂರ್ವಾಚಾರ್ಯವಿನಿರ್ಮಿತೈ ಸ್ಸುವಿಮಲೈ ಸ್ತಂತ್ರೈಃಸಮಾಹೃತ್ಯಯಃ
ವೈದ್ಯೇಷ್ವಸ್ಯ ಯಶಸ್ತನೋತು ಧವಲಂ ಕ್ಷೋಣೀತಲೇ ಶಾಶ್ವತಮ್ ||

ಮಯಾಲೋಕಿ ಗ್ರಂಥೋ ಹಿ ಕಾರ್ಣಾಟವಾಚಾ
ತತೋಽವಾಪಿ ಸ್ವಾಂತೇಽತಿತೋಷಃ ಸುಯೋಗ್ಯೈಃ ।
ಅಗಸ್ತ್ಯಾಶ್ರಮೀಯಾಶ್ರಮೇಣೇಹ ಕಾಶ್ಯಾಮ್
ಭಿಷಕ್ ಸತ್ಯನಾರಾಯಣೋಪಾಭಿಧೇನ ಸಮ್ಯಕ್ ||

ಫಾ. ಕೃ ೬ ಸೌಮ್ಯವಾಸರ
ಸಂವತ್. ೨೦೧೦

**ಅಗಸ್ತ್ಯಾಶ್ರಮಾಶ್ರಯಃ**
**ಕಾಶಿ.**





ದಿವಂಗತ ವೈದ್ಯ ಹೆರಕಲ್ಲ ಗುಂಡಾಚಾರ್ಯರು.



ಡಾ. ಸವಣೂರ ಮತ್ತು ವೈದ್ಯ ಬುರ್ಲಿ.

(ಫೋಟೋ ತಾ॥ ೧೫-೨-೧೯೫೩ ಪುಣೆ.)

# ಅರಿಕೆ

**ದಕ್ಷಸ್ತೀರ್ಥಾತ್ತ ಶಾಸ್ತ್ರಾರ್ಥೋ ದೃಷ್ಟಕರ್ಮಾ ಶುಚಿರ್ಭಿಷಕ್ ।**
**ಪೀಯೂಷ ಪಾಣಿಃ ಕುಶಲಃ ಕ್ರಿಯಾಸು ।**

ಎಂಬಿವೇ ಮೊದಲಾದ ಉತ್ತಮ ವೈದ್ಯ ಲಕ್ಷಣಗಳು, ದಿವಂಗತ ಡಾ|| ಸವಣೂರ ಅವರಲ್ಲಿ ಎದ್ದು ಕಾಣುತ್ತಿದ್ದವು. ಮೂರು ತಪಗಳಿಗೆ ಮಿಕ್ಕಿದ ನನ್ನ ಇತ್ತೀಚೆಗಿನ ಆಯುಷ್ಯವು ಅವರ ಪವಿತ್ರ ಸಹವಾಸದಲ್ಲಿ ಅವರ ದಿವ್ಯ ಜ್ಯೋತಿಯು ಮಾಯವಾಗುವ ಕ್ಷಣದವರೆಗೂ ಆ ಪುಣ್ಯಾತ್ಮರ ಸೇವೆಯನ್ನು ಅಂತಃಕರಣ ಪೂರ್ವಕವಾಗಿ ಮಾಡುತ್ತ ಅತ್ಯಂತ ನಿಕಟವರ್ತಿಯಾಗಿ ಕಳೆಯಿತು. ನನ್ನಿಂದೇನಾದರೂ ಅಲ್ಪ ಸ್ವಲ್ಪ ಆಯುರ್ವೇದದ ಸೇವೆಯು ಕದಾಚಿತ್ ಸಂಭವಿಸಿದ್ದರೆ ಆದಕ್ಕೆ ಆ ಮಹಾವಿಭೂತಿಯ ಸಹವಾಸವೇ ಕಾರಣ. ಆವರ ನಿಧನದ ನಂತರವೂ ಅವರಿಗೆ ಅತ್ಯಂತ ಪ್ರಿಯವಾದ ಆಯುರ್ವೇದ ಮತ್ತು ಜನಸೇವಾ ಕಾರ್ಯವನ್ನು ಈ ಪುಸ್ತಕ ರೂಪದಿಂದ ಮುಂದುವರಿಸಬೇಕೆಂಬ ಹಂಬಲ ತಾಳಿದ್ದೇನೆ.

ಅವರಿರುವಾಗ ಕರ್ನಾಟಕದ ದೂರದೂರದ ಮೂಲೆಗಳಿಂದಲೂ ಆಲೋಪಥಿ ಔಷಧದಿಂದ ಗುಣಹೊಂದದ, ಅಸಾಧ್ಯ ಬೇನೆಗಳಿಂದ ಬಳಲುತ್ತಿದ್ದ ರೋಗಿಗಳು ಆಶಾಪೂರ್ಣ ಹೃದಯದಿಂದ ಅವರೆಡೆಗೆ ಬಂದು ಅವರ ಅಮೃತ ಹಸ್ತದಿಂದ ಆಯುರ್ವೇದಿಯ ಔಷಧಗಳನ್ನು ತೆಗೆದು ಕೊಂಡು ಗುಣ ಹೊಂದಿದ್ದನ್ನು ಕಣ್ಣಾರೆ ಕಂಡ ನಾನು, ಅವರು ನಮ್ಮನ್ನಗಲಿದರೂ ಅವರ ಅನುಭವದ ದಿವ್ಯ ಔಷಧಿಯೋಗಗಳನ್ನು ಆವರಲ್ಲಿ ವಿಶ್ವಾಸವಿದ್ದ ಜನತೆಗೆ ನೀಡುವದು ನನ್ನ ಶ್ರೇಷ್ಠ ಕರ್ತವ್ಯವೆಂದು ಭಾವಿಸಿರುವೆ. ಅವರಿರುವಾಗಲೇ ಈ ನನ್ನ ವಿಚಾರವನ್ನು ಅವರಿಗೆ ತಿಳಿಸಿ ಅವರಿಂದ ಸಮ್ಮತಿ ಪಡೆದಿದ್ದೆ ಆದರೆ ಅವರ ಜೀವಿತವನ್ನೇ ನಾಶಮಾಡು

ವಂಥ ದುಃಸಾಧ್ಯ ವ್ಯಾಧಿಯು ಅವರನ್ನು ಪೀಡಿಸುತ್ತಿತ್ತು. ಅಲ್ಲದೆ ಅಚ್ಚಾಗುತ್ತಿರುವ ಅವರ 'ಶಾರೀರಕ್ರಿಯಾ' ಪುಸ್ತಕದ ಕಡೆಗೆ ನಾವಿಬ್ಬರೂ ಲಕ್ಷಹಾಕದೆ ಗತ್ಯಂತರವಿರಲಿಲ್ಲ. ಆದ್ದರಿಂದ ಇದೀಗ ತಡಮಾಡಲಾಗವಲ್ಲದೇಕೆ, ಅವರ ಔಷಧಿಯೋಗಗಳನ್ನು ಸಂಗ್ರಹಿಸಿ ಪ್ರಕಟಿಸುವ ಸಾಹಸ ಮಾಡುತ್ತಿರುವೆ.

ಈ ಸಂಗ್ರಹವು ನನ್ನಲ್ಲಿಯದಲ್ಲದೆ ಡಾ|| ಸವಣೂರ ಅವರ ಪ್ರೀತಿಯ ಅಳಿಯಂದಿರೂ ಬೆಳಗಾಂವಿಯ ಪ್ರಸಿದ್ಧ ಡಾಕ್ಟರರೂ ಸಾರ್ವಜನಿಕ ಕಾರ್ಯಕರ್ತರೂ, ಶಾರೀರಕ್ರಿಯಾ ಗ್ರಂಥದ ಪ್ರಕಾಶಕರೂ ಆದ ಡಾ|| ಹ. ರಾ. ತೆರಗುಂಡಿ, ಡಾ|| ಸವಣೂರ ಅವರೊಡನೆ ಸತತ ೨೦ ವರ್ಷ ಸಹವಾಸದಲ್ಲಿದ್ದು ಆಯುರ್ವೇದದ ಅಭ್ಯಾಸಮಾಡಿದ ಮತ್ತು ಅವರ ಆಂಗ್ಲ ಗ್ರಂಥವಾದ "ಮಟೇರಿಯಾ ಮೆಡಿಕಾ" ಬರೆಯುವಾಗ ಬಹುಶ್ರಮವಹಿಸಿ ಅದರ ಪ್ರಥಮ ಭಾಗವನ್ನು ಪ್ರಕಟಿಸಿದ ಡಾಕ್ಟರ ಚಿ. ಲ. ಜತಾರ L. C. P ಶ್ರೀ. ಬಿ ಡಿ. ಬಡಭಡೆ, ಶ್ರೀ ರಾ ಸ. ಜೋಶಿ ಮತ್ತು ಡಾಕ್ಟರರ ವಿಶ್ವಾಸಿಕ ನಿಕಟವರ್ತಿ ಡಾ|| ಆರ್. ವ್ಹಿ. ಪಾಠೋಲೆ, ಶ್ರೀ ಜೇರೆ ಕಾಷ್ಟೌಷಧಿಸಂಗ್ರಾಲಯ ಬೆಳಗಾಂವಿ (ಇವರು ದಿವಂಗತರ ಅನೇಕ ಕಷಾಯದ ಪಾಠಗಳನ್ನು ಕೊಟ್ಟಿದ್ದಾರೆ) ಅವರು ತಮ್ಮಲ್ಲಿದ್ದ ಔಷಧಿಯೋಗಗಳನ್ನು ಕೊಟ್ಟು ತುಂಬ ಉಪಕೃತನನ್ನಾಗಿ ಮಾಡಿದ್ದಾರೆ.

ಈ ಪುಸ್ತಕದ ಹಸ್ತಪ್ರತಿಯೊಡನೆ ಕಾಶಿಗೆ ಹೋಗಿ ಪೂಜ್ಯ ವೃದ್ಧ, ವಿದ್ವಾನ್ ವೈದ್ಯರೂ ಭಾರತ ರಾಷ್ಟ್ರಪತಿ ಚಿಕಿತ್ಸಕರೂ ಆದ ಪಂಡಿತ ಸತ್ಯನಾರಾಯಣ ಶಾಸ್ತ್ರಿಗಳನ್ನು ಕಂಡು ನನ್ನ ಉದ್ದೇಶವನ್ನು ತಿಳಿಸಿದೆ. ಆಗ ಅವರು ಪ್ರೀತರಾಗಿ ಶಿಷ್ಯವಾತ್ಸಲ್ಯದಿಂದ ಆಶೀರ್ವಾದ ಪೂರ್ವಕ ಅನುಭೂತ ಯೋಗಗಳನ್ನು ಕೊಟ್ಟು ಸಹಾಯ ಮಾಡಿದರು. ಕಾಶಿಯ ಸುಪ್ರಸಿದ್ಧ ಕೀರ್ತಿಶೇಷ ತ್ರಿಂಬಕ ಶಾಸ್ತ್ರಿಗಳ ಪಟ್ಟಶಿಷ್ಯರೂ ನನ್ನ ಸ್ನೇಹಿತರೂ ಆದ ಪಂಡಿತ ಶ್ರೀನಿವಾಸ ಶಾಸ್ತ್ರಿಗಳು, ಪುಣೆಯ

ಆಯುರ್ವೇದಾಭ್ಯಾಸಿ ಡಾ ವಿ. ಮ. ಬೇಂದ್ರೆ M. D. (Germany) ವೈದ್ಯರತ್ನ ಹಣಮಂತಾಚಾರ್ಯ ಉಮರ್ಜಿ ಪುಣೆ, ವೈದ್ಯ ಕೃ ರಾ. ಕೊರ್ತಿ ಬಿಜಾಪೂರ, ವೈದ್ಯ ವಾದಿರಾಜ ಜಾಹಗೀರದಾರ ಬಾಗಲಕೋಟೆ ಆಯುರ್ವೇದ ಶಾಸ್ತ್ರಜ್ಞ ಡಾ. ಗೋ. ನಾ ಮಂಗಳವೇಡೆ L.M. & S. ವಿಜಾಪೂರ, ಭಿಷಗಾಚಾರ್ಯ ಪಾಂಡುರಂಗಶಾಸ್ತ್ರಿ ಕಾಸೇಗಾಂವಕರ ಕರಾಡ, ಡಾ ಎಮ್. ಆರ್. ಭಟ್ಟ ಮತ್ತು ಡಾ. ಎಮ್. ಗೋಪಾಲ ಕೃಷ್ಣರಾವ ಮಂಗಳೂರ (ಡಾ. ಗೋಪಾಲ ಕೃಷ್ಣರಾಯರು ದಿವಂಗತ ತಾರಾನಾಥ ಪಂಡಿತರ ಕೆಲಯೋಗ ಕೊಟ್ಟಿರುವರು) ಈ ಎಲ್ಲ ವಿದ್ವಾನ್ ವೈದ್ಯರು ತಮ್ಮ ಅನುಭವಯುಕ್ತ ಯೋಗಗಳನ್ನು ಕೊಟ್ಟು ನನ್ನ ಈ ಕಾರ್ಯದಲ್ಲಿ ಸಹಕಾರ ನೀಡಿದ್ದಕ್ಕಾಗಿ ಅವರಿಗೆಲ್ಲ ಧನ್ಯವಾದ ಪೂರ್ವಕ ನನ್ನ ಕೃತಜ್ಞತೆಗಳು.

ಬೆಳಗಾಂವಿಯ ಸುಪ್ರಸಿದ್ಧ ಸರ್ಜನರೂ ಡಾ|| ಸನಣೂರ ಅವರ ವಿಶ್ವಾಸಿಕ ಚಿಕಿತ್ಸಕರೂ ಆದ ಡಾ|| ಜೀರಗೆ ಅವರು, ಮತ್ತು ಪೂಜ್ಯ ರಾಮಾಚಾರ್ಯ ಗಲಗಲಿ ಅವರು, ದಿವಗಂತರ ಗುಣ ಗೌರವವನ್ನು ಚಿತ್ರಿಸಿ ಕೊಟ್ಟಿದ್ದಕ್ಕಾಗಿ ಅವರಿಬ್ಬರಿಗೂ ಮತ್ತು ಈ ಪುಸ್ತಕದ ಹಸ್ತ ಪ್ರತಿಯನ್ನು ನೋಡಿ ಪ್ರಕಟಿಸಲು ಪ್ರೋತ್ಸಾಹಿಸಿದ ನನ್ನ ವಿದ್ವಾನ್ ಮಿತ್ರರಾದ ಭೀಷಕ್ ಶಿರೋಮಣಿ ಆದ್ಯ ಅನಂತಾಚಾರ್ಯ ಹಾಗೂ ಶ್ರೀ. ಜೋರಾಪೂರ ಗುರುರಾಯರಿಗೆ ನನ್ನ ಧನ್ಯವಾದಗಳು.

ಮುನ್ನುಡಿ ಬರೆದುಕೊಟ್ಟ ಕ್ಯಾಪ್ಟನ್ ಜಿ. ಶ್ರೀನಿವಾಸಮೂರ್ತಿ ಅವರ ಉಪಕಾರವನ್ನು ನಾನು ಯಾವಾಗಲೂ ಸ್ಮರಿಸುವೆ ಮುದ್ರಣ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿ ತುಂಬ ಸಹಾನುಭೂತಿಯನ್ನು ತೋರಿಸಿದ ದಿ ಸಕ್ರ್ರೋಜ ಪ್ರಿಂಟಿಂಗ ಪ್ರೆಸ್ಸಿನ ಒಡೆಯರಾದ ಶ್ರೀ. ಸಿ.ಎಮ್. ಸಕ್ರ್ರೋಜಿ B A., (Hons) ಇವರಿಗೂ ನನ್ನ ಧನ್ಯವಾದಗಳು.

ಪ್ರುಫ್ ನೋಡಲು ಸಹಾಯ ಮಾಡಿದ ಗೆಳೆಯ ಶ್ರೀ. ಹುದ್ದಾರ ಭೀಮರಾಯರಿಗೂ ಶ್ರೀ. ಪುಟ್ಟಾಚಾರ್ಯ ಮಳಗಿ ಅವರಿಗೂ ತುಂಬ ಋಣಿಯಾಗಿದ್ದೇನೆ.

ಈ ನನ್ನ ಅಲ್ಪ ಸೇವೆಯು ಜನತೆಗೆ ಯೋಗ್ಯವೆನಿಸಿದಲ್ಲಿ ದಿವಗಂತರ ಮತ್ತು ಇತರ ಪಂಡಿತರ ಇನ್ನೂ ಅನೇಕ ಅಮೌಲ್ಯ ಸಂಗ್ರಹವನ್ನು ಸಂಪಾದಿಸಿ ಪ್ರಸಿದ್ಧಿಸಲು ಈ ನನ್ನ ವೃದ್ಧಾಪ್ಯದಲ್ಲಿಯೂ ಸಾಹಸ ಮಾಡುವೆನು. ಈ ಪುಸ್ತಕವು ಮುಖ್ಯವಾಗಿ ವೈದ್ಯರಿಗೂ ಆಯುರ್ವೇದದ ಬಗ್ಗೆ ಆಸ್ಥೆಯುಳ್ಳ ಡಾಕ್ಟರರಿಗೂ ಮಾರ್ಗದರ್ಶನ ಮಾಡಬಹುದೆಂದು ನಂಬಿ ಪ್ರಸಿದ್ಧಿಸಿರುವೆ, ಇದು ಸಿದ್ಧಾಂತ ಚಿಕಿತ್ಸೆಯಲ್ಲ. ಕೇವಲ ಮಾರ್ಗದರ್ಶನ ಮಾಡುವಂತಹದೆಂದು ನನ್ನ ಕಲ್ಪನೆ.

ಡಾಕ್ಟರ ಸವಣೂರ ಮತ್ತು ಡಾ॥ ಶ್ರೀನಿವಾಸಮೂರ್ತಿ ಅವರ ಬ್ಲಾಕುಗಳನ್ನು ಕೊಟ್ಟಿದ್ದಕ್ಕಾಗಿ ಡಾ॥ ತೆರಗುಂಡಿಯವರ ಉಪಕಾರವನ್ನು ನೆನೆಸುತ್ತಿರುವೆ.

ದಿವಗಂತರು ಬಿಡಿಬಿಡಿ ಬರೆದ ಯೋಗಗಳನ್ನು ಸಂಗ್ರಹಿಸಿದ ನಾನು ನನ್ನ ಕಲ್ಪನೆಯಂತೆ ಒಂದು ಕ್ರಮಕ್ಕೆ ತಂದು ಬಿಟ್ಟಿರುವೆ.

ಇದರಲ್ಲಿ ಏನಾದರೂ ಸಂಶಯ ದೋಷಗಳು ಕಂಡುಬಂದಲ್ಲಿ ಓದುಗರು ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ.

ಆಯುರ್ವೇದ ಸೇವಾಕುಟಿ
ಬಾಗಲಕೋಟ.
ತಾ॥ ೨೮—೧೧ ೧೯೫೪

ತಮ್ಮ ನಮ್ರ ಸೇವಕ

**ಮಧ್ವಾಚಾರ್ಯ ಬುರ್ಲಿ**

# ಅಜಾತಶತ್ರು



**ಡಾ. ಹಣಮಂತರಾವ ಸವಣೂರ**

| ಜನನ | ಮರಣ |
|---|---|
| ಆಷಾಢ ಶುದ್ಧ ೬ ಶಕೆ ೧೮೦೩ | ವೈಶಾಖ ವದ್ಯ ೬ ಶಕೆ ೧೮೭೬ |
| ತಾ. ೧೪-೭-೧೮೮೧ | ತಾ. ೪-೬-೧೯೫೪ |
| ಕಲಾದಗಿಯಲ್ಲಿ | ಬೆಳಗಾವಿಯಲ್ಲಿ |



ಕ್ಯಾಪ್ಟನ್ ಜಿ. ಶ್ರೀನಿವಾಸಮೂರ್ತಿ, B.A.B.L.,M.B.C.M. ವೈದ್ಯರತ್ನ,
ಅಡಿಯಾರ ಮದ್ರಾಸ.

# Forward

I have gone through the book "DIVYOUSHADHI" in Kannada by Shri Vaidya M. V. Kurli with profit and pleasure. As a result I heartily recommend it to other Ayurvedists knowing Kannada, in the firm belief that they too would benefit likewise from a study of the book. The proper persuit of the practice of Ayurveda, as of every medical science, constitutes a fruitful method which can lead to discovery of new and valuable information. Each and every new case we see can reveal to us something new and valuable, if only we adopt the right individualistic approach to the study of each case Just as no two persons in normal health are exactly alike but each differs from the other in some special way so as to enable us to note the distinguishing features of each individual and identify him correctly even in the case of twins and others closely resembling each other so also no two individuals in ill health are exactly alike even though they may be suffering from the same ailment, but each differs from the other in some special way, so as to enable the experienced physician to note the distinguishing features, physical and mental, of each case and adjust treatment dietic, medicinal etc ) according to the findings of his individualistic approach to the study of each case To the extent that expertness in the individualistic approach is acquired to that extent will be our success in the proper treatment of each

case Further more, diseases are frequently been to exhibit variations in their manifestations, from age to age, and country to country as also in relation to changing conditions of individuals as well as their social and other environments. We have to take note of all these factors as they occur and adjust remedies and diets appropriate to the changed and changing conditions It is exactly in effecting such adjustments that all successful practitioners of the day excel. It is exactly in recording methods and the recipes of a number of such successful practitioners that this book of Shri Vaidya Burli excels The book is well worthy of wide appreciation and popularity among Ayurvedic practitioners knowing Kannada I feel that we cannot be sufficiently grateful to Shri Vaidya Burli for placing at our service a book containing such valuable practical information.

*Adyar, Madras,*
*11-12-1954.*

*Sd/* **G. Shrinivas Murti.**



# ಮುನ್ನುಡಿ

ಶ್ರೀ ಎಮ್. ವ್ಹಿ. ಬುರ್ಲಿಯವರು ಕನ್ನಡದಲ್ಲಿ ಬರೆದ **ದಿವ್ಯೌಷಧಿ** ಎಂಬ ಪುಸ್ತಕವನ್ನು ಓದಿ ಆನಂದವನ್ನೂ, ಜ್ಞಾನಲಾಭವನ್ನೂ ಪಡೆದುಕೊಂಡೆನು. ತತ್ಪರಿಣಾಮವಾಗಿ ಉಳಿದ ಕನ್ನಡಬಲ್ಲ ಆಯುರ್ವೇದ ವೈದ್ಯರಿಗೆ, ಅವರೂ ನನ್ನಂತೆ ಈ ಪುಸ್ತಕದ ಅಭ್ಯಾಸದಿಂದ ಲಾಭ ಪಡೆಯುವರೆಂಬ ಧೃಢ ವಿಶ್ವಾಸದಿಂದ ಓದಲು ಹೃತ್ಪೂರ್ವಕವಾಗಿ ಶಿಫಾರಸು ಮಾಡುತ್ತೇನೆ. ಹೊಸ ಮತ್ತು ಅಮೌಲ್ಯ ಸಂಗತಿಗಳ ಶೋಧನೆಗೆ ಮಾರ್ಗದರ್ಶಿಯಾದ ಫಲಕಾರಿ ಪದ್ಧತಿಗಳು, ಪ್ರತಿಯೊಂದು ವೈದ್ಯಕೀಯ ಶಾಸ್ತ್ರದಲ್ಲಿದ್ದಂತೆ ಆಯುರ್ವೇದದ ವ್ಯಾವಹಾರಿಕ ಯೋಗ್ಯ ಸಾಧನೆಯಲ್ಲಿಯೂ ಕಂಡು ಬರುತ್ತವೆ. ಸರಿಯಾದ ವೈಯ್ಯಕ್ತಿಕ ದೃಷ್ಟಿಕೋನವನ್ನಿಟ್ಟುಕೊಂಡು ಪ್ರತಿಯೊಂದು ರೋಗವನ್ನು ಅಭ್ಯಸಿಸಿದರೆ ನಮಗೆ ಹೊಸ ಮತ್ತು ಬೆಲೆಯುಳ್ಳ ಸಂಗತಿಗಳು ತಿಳಿಯಲು ಶಕ್ಯವಾಗುವದು. ಒಳ್ಳೇ ದೇಹಾರೋಗ್ಯದಲ್ಲಿದ್ದ ಎರಡು ವ್ಯಕ್ತಿಗಳು ಒಬ್ಬರಂತೆ ಒಬ್ಬರು ಇರಲಾರರು. ಅವರು ಅವಳಿ-ಜವಳಿಯಾಗಿದ್ದರೂ ಅವರಲ್ಲಿಯ ಅಂತರವನ್ನು ಸೂಚಿಸುವ ಕೆಲವು ವಿಶಿಷ್ಟ ಲಕ್ಷಣಗಳಿಂದ ಸರಿಯಾಗಿ ನಾವು ಅವರನ್ನು ಗುರುತಿಸಬಲ್ಲೆವು. ಅದರಂತೆ ಒಂದೇ ಬೇನೆಯಿಂದ ಎರಡು ವ್ಯಕ್ತಿಗಳು ಬಳಲಬಹುದು. ಆದರೆ ಅನುಭವಿಕ ವೈದ್ಯನು ಆ ವ್ಯಕ್ತಿಗಳ ಬೇನೆಯಲ್ಲಿಯ ವಿಶಿಷ್ಟ ರೀತಿಯ ಅಂತರವನ್ನು ಗಮನಿಸಿ ಅವರ ದೈಹಿಕ ಮತ್ತು ಮಾನಸಿಕ ಲಕ್ಷಣಗಳಲ್ಲಿಯ ವ್ಯತ್ಯಾಸವನ್ನು ಅರಿತುಕೊಂಡು ತನ್ನ ವೈಯ್ಯಕ್ತಿಕ ದೃಷ್ಟಿಯ ಅಭ್ಯಾಸದಿಂದುಂಟಾದ ಅನುಭವಗಳಿಗೆ ತಕ್ಕಂತೆ ಆಹಾರ ಮತ್ತು ಔಷಧೀಯ ಚಿಕಿತ್ಸೆಗಳನ್ನು ನೀಡುತ್ತಾನೆ. ಪ್ರತಿಯೊಂದು ರೋಗ ನಿದಾನಗಳಲ್ಲಿಯ ಯಶಸ್ಸು ನಮ್ಮ ವೈಯಕ್ತಿಕ ದೃಷ್ಟಿಯ ಜಾಣ್ಮೆಯನ್ನೇ ಅವಲಂಬಿಸಿದೆ. ಇದಲ್ಲದೆ

ವಯಸ್ಸಿಗನುಸಾರವಾಗಿ ದೇಶಕ್ಕನುಸಾರವಾಗಿ, ವ್ಯಕ್ತಿಯ ದೈಹಿಕ ಬದಲಾವಣೆಗಳ ಸ್ಥಿತಿಗನುಸಾರವಾಗಿ ಸಾಮಾಜಿಕ ಮತ್ತು ವಾತಾವರಣಕ್ಕನುಸಾರವಾಗಿ ರೋಗಗಳು ಕಾಣಿಸಿಕೊಳ್ಳುವಲ್ಲಿ ಅನೇಕ ಬದಲಾವಣೆಗಳು ತೋರುತ್ತವೆ. ನಾವು ಈ ಎಲ್ಲ ಲಕ್ಷಣಗಳನ್ನು ಗಮನಿಸಿ ಅವುಗಳಿಗೆ ತಕ್ಕಂತೆ ಚಿಕಿತ್ಸೆಯನ್ನೂ, ಆಹಾರವನ್ನೂ (ಬದಲಾವಣೆಯಾದ ಮತ್ತು ಆಗುವ ಸ್ಥಿತಿಗನು ಸಾರವಾಗಿ) ನೀಡಬೇಕು ಇವುಗಳ ಪರಿಣಾಮಕಾರಿಯಾದ ಹೊಂದಿಕೆಯಲ್ಲಿಯೇ ಯಶಸ್ವೀ ವೈದ್ಯನು ಎಲ್ಲರನ್ನೂ ಮೀರುತ್ತಾನೆ. ಇಂಥ ಯಶಸ್ವೀ ವೈದ್ಯರ ಪದ್ಧತಿಗಳನ್ನೂ ಔಷಧಗಳನ್ನೂ ನೀಡುವಲ್ಲಿ ಶ್ರೀ ವೈದ್ಯ ಬುರ್ಲಿಯವರ ಪುಸ್ತಕವು ಹಿರಿಮೆಯನ್ನು ಪಡೆದಿದೆ. ಕನ್ನಡಬಲ್ಲ ಆಯುರ್ವೇದ ವೈದ್ಯರ ಅಪಾರ ಮೆಚ್ಚುಗೆಗೆ ಗೌರವಕ್ಕೆ ಈ ಪುಸ್ತಕವು ಪಾತ್ರವಾಗಲು ಯೋಗ್ಯವಾಗಿದೆ. ಅಮೌಲ್ಯ ವ್ಯಾವಹಾರಿಕ ಸಂಗತಿಗಳನ್ನೊಳಗೊಂಡ ಈ ಪುಸ್ತಕವನ್ನು ನಮಗೆ ನೀಡಿದಕ್ಕಾಗಿ ಎಷ್ಟು ಕೃತಜ್ಞತೆಗಳನ್ನು ಶ್ರೀ ಬುರ್ಲಿ ಅವರಿಗೆ ಸಲ್ಲಿಸಿದರೂ ಕಡಿಮೆಯೆಂದು ನನಗನ್ನಿಸುತ್ತದೆ.

೧೧-೧೨-೧೯೬೪
ಅಡ್ಯಾರ ಮದ್ರಾಸ

ಜಿ. ಶ್ರೀನಿವಾಸಮೂರ್ತಿ
ವೈದ್ಯರತ್ನ



# ಮೆಚ್ಚುಗೆ

ದಿವಂಗತ ಡಾ|| ಸವಣೂರರವರ ಸ್ಮರಣಾರ್ಥವಾಗಿ "**ದಿವ್ಯೌಷಧಿ**" ಎಂಬ ಪುಸ್ತಿಕೆಯನ್ನು ಬಾಗಲಕೋಟೆಯ ವೈದ್ಯ ಬುರ್ಲಿಯವರು ಇದೀಗ ಪ್ರಕಟಿಸುತ್ತಿರುವದು ನನಗೆ ಹರ್ಷವನ್ನುಂಟು ಮಾಡಿದೆ. ವೈದ್ಯ ಬುರ್ಲಿಯವರು, ಡಾ|| ಸವಣೂರ ಅವರ ನಿಕಟ ಮಿತ್ರರಾಗಿದ್ದು ಪುಸ್ತಕಯಲ್ಲಿಯ ಯೋಗಗಳು ಡಾ|| ಸವಣೂರ ಅವರ ಅನುಭವ ಸಿದ್ಧವಾದವುಗಳಾಗಿವೆ. ಈ ಎಲ್ಲ ಔಷಧಿ ಯೋಗಗಳನ್ನು ಒಂದೆಡೆ ಸೇರಿಸಿ ಎಲ್ಲ ವೈದ್ಯ ಡಾಕ್ಟರ ಜನರಿಗೆ ವೈದ್ಯ ಬುರ್ಲಿ ಅವರು ಒಂದು ಮಹತ್ಕಾರ್ಯವನ್ನು ಮಾಡಿಕೊಟ್ಟದ್ದಕ್ಕಾಗಿ ನಾನು ಅವರನ್ನು ಅಭಿನಂದಿಸದಿರಲಾರೆ. ಈ ಪುಸ್ತಿಕೆಯ ಪೂರ್ಣ ಲಾಭವನ್ನು ವೈದ್ಯಕಿ ವೃತ್ತಿಯಲ್ಲಿದ್ದವರು ಹೊಂದುವರೆಂದು ನನಗೆ ಬಲವಾದ ನಂಬಿಕೆಯಿದೆ.

ಬೆಳಗಾಂವಿ
೧-೧೨-೫೪

**ಡಾ|| ಹ. ರಾ. ತೆರಗುಂಡಿ**



# ವಿಷಯಾನುಕ್ರಮಣಿಕೆ

॥ ಶ್ರೀ ಧನ್ವಂತರಿಃ ಪ್ರಸನ್ನಃ ಅಸ್ತು ॥

# ದಿವ್ಯೌಷಧಿ

## ಆಯುರ್ವೇದೀಯ ಶಾರೀರ

ಆರೋಗ್ಯ ರಕ್ಷಣೆ ಅಥವಾ ರೋಗಗಳ ಮೇಲೆ ಔಷಧೋಪಚಾರ ಮಾಡುವವರಿಗೆ, ಶರೀರದ ರಚನೆ ಮತ್ತು ಆಯಾ ಇಂದ್ರಿಯಗಳ ಕ್ರಿಯೆಗಳ ಸಾಮಾನ್ಯಜ್ಞಾನವಿರುವದು ಅವಶ್ಯವಿದೆ. ಕೇವಲ ರೋಗ ಲಕ್ಷಣಗಳನ್ನು ಕೇಳಿಕೊಂಡು ಔಷಧ ಯೋಜನೆಯನ್ನು ಮಾಡುವದು ಸರಿಯಾದದ್ದಲ್ಲ. ಯಾಕಂದರೆ ಬೇರೆ ಬೇರೆ ಪ್ರಕೃತಿಗಳಲ್ಲಿ ವ್ಯತ್ಯಾಸವು ಸ್ವಾಭಾವಿಕವಾಗಿ ಕಂಡು ಬರುತ್ತಿರುವದರಿಂದ ಒಂದೇ ರೋಗದ ಪರಿಣಾಮವು ಎಲ್ಲರಲ್ಲಿ ಒಂದೇ ಪ್ರಕಾರದ್ದಾಗಿ ಸಂಭವಿಸುವದೆಂದು ಹೇಳಲಿಕ್ಕೆ ಬರುವದಿಲ್ಲ. ಅದರಂತೆ ಒಂದೇ ಔಷಧವು ಎಲ್ಲ ಪ್ರಕೃತಿಗಳಲ್ಲಿ ಒಂದೇ ರೀತಿಯಿಂದ ಗುಣ ಕೊಡುವದೆಂದು ಹೇಳಲು ಶಕ್ಯವಿಲ್ಲ. ಆದುದರಿಂದ ರೋಗಿಗಳ ಪ್ರಕೃತಿಯನ್ನೂ ರೋಗಗಳು ಆಕ್ರಮಿಸುವ ಮಾರ್ಗಗಳನ್ನೂ ಹಾಗೂ ಔಷಧಿಗಳ ಕ್ರಿಯಾ ಸಾಮರ್ಥ್ಯವನ್ನೂ ಮೊದಲೇ ತಿಳಿದುಕೊಳ್ಳುವದು ಯೋಗ್ಯವಾದುದು.

ವೈದ್ಯ ಶಾಸ್ತ್ರಜ್ಞರು ಶಾರೀರ ಶಾಸ್ತ್ರವನ್ನು ಎರಡು ರೀತಿಯಿಂದ ತಿಳಿದುಕೊಳ್ಳಲು ಪ್ರಯತ್ನ ಮಾಡಿದ್ದಾರೆ. ಪೌರ್ವಾತ್ಯರು ಸಾಂಖ್ಯ ಅಥವಾ ವೈಶೇಷಿಕ ದರ್ಶನಗಳು ತೋರಿಸಿದ ದೃಷ್ಟಿಪಥದಿಂದ ಅಂದರೆ ಪಾಂಚಭೌತಿಕ ತತ್ವಾನುಸಾರವಾಗಿ ಜೀವಿತದ ಕಲ್ಪನೆಯನ್ನು ಮಾಡಿದ್ದಾರೆ. ಪಾಶ್ಚಿಮಾತ್ಯರು ಅವಯವಗಳ ಸಂಖ್ಯೆಗೆ ಪ್ರಾಧಾನ್ಯವನ್ನು ಕೊಟ್ಟು ಶಾರೀರ ರಚನೆಯನ್ನು ಕಲ್ಪಿಸಿದ್ದಾರೆ.

ಮೊದಲನೇಯದಕ್ಕೆ ಪಾಂಚಭೌತಿಕ ಶಾರೀರವೆಂದೂ ಎರಡನೆಯದಕ್ಕೆ ಸಂಖ್ಯಾ ಶಾರೀರವೆಂದೂ ಅನ್ನಬಹುದು. ಆಯುರ್ವೇದೀಯರು ದಾರ್ಶನಿಕರ ದೃಷ್ಟಿಯನ್ನು ಸ್ವೀಕರಿಸಿ ಅಖಿಲ ವಿಶ್ವದಲ್ಲಿ ಕಾಣುವ ಯಾವತ್ತೂ ಪದಾರ್ಥಗಳಿಗೆ ಪುರುಷ ಮತ್ತು ಪ್ರಕೃತಿ ಇವೆ ಎರಡು ಮುಖ್ಯ ಆಧಾರಗಳೆಂದು ನಂಬಿ "ಪುರುಷೋಽಯಂ ಲೋಕಸಂಮಿತ:" ಎಂಬ ತತ್ವದ ಮೇಲೆ ತಮ್ಮ ಅಖಂಡ ಶಾಸ್ತ್ರವನ್ನು ರಚಿಸಿದ್ದಾರೆ. ಜೀವಾತ್ಮಾ ಮತ್ತು ಮನಸ್ಸು ಇವುಗಳಿಗೆ ಶರೀರವಲ್ಲಿ ಜಡದೇಹಕ್ಕಿದ್ದಷ್ಟೇ ಕಿಂಬಹುನಾ ತುಸು ಹೆಚ್ಚು ಪ್ರಮಾಣದ ಮೇಲೆ ಮಹತ್ವವನ್ನು ಕೊಟ್ಟಿದ್ದರಿಂದ, ಉನ್ಮಾದದಂಥ ಮಾನಸಿಕ ರೋಗಗಳ ಉತ್ಪತ್ತಿಯನ್ನು ಕಂಡು ಹಿಡಿಯಲಿಕ್ಕೆ ಅವರಿಗೆ ಬಲವತ್ತರ ಸೌಕರ್ಯವುಂಟಾಗಿರುತ್ತದೆ. ಆಯುರ್ವೇದೀಯರ ಮತಾನುಸಾರ ಜೀವಿತವೆಂದರೆ ಶರೀರ, ಇಂದ್ರಿಯ, ಮನಸ್ಸು ಮತ್ತು ಆತ್ಮಾ ಇವುಗಳ ಸಂಯೋಗವು; ಇದು ನಿತ್ಯವಿದ್ದು ಪೂರ್ವಜನ್ಮಕ್ಕೆ ಸಂಬಂಧಿಸಿರುತ್ತದೆ.

ಜೀವವು ಪೂರ್ವಜನ್ಮಕೃತ ಕರ್ಮಗಳಿಗೆ ಬದ್ಧವಿರುವದರಿಂದ ಆಯುಷ್ಯವೆಂಬ ಬಂಧನದಲ್ಲಿ ತೊಡಗಿಸಿ ಇಡಲ್ಪಟ್ಟಿದೆ. ಕೇವಲ ಪಾಂಚಭೌತಿಕ ಶಾರೀರದ ಕಲ್ಪನೆಯು ಈ ರೀತಿ ಇದ್ದುದರಿಂದ ಆಯುರ್ವೇದೀಯರಿಗೆ ಶಲ್ಯ-ಶಾಲಾಕ್ಯ ವಿದ್ಯೆಗಳ ಮೇಲೆ ಪ್ರಭುತ್ವವು ಸಾಕಷ್ಟು ದೊರೆಯುವದಿಲ್ಲ. ಆ ಸೌಕರ್ಯಕ್ಕೋಸ್ಕರ ಶಾರೀರ ಶಾಸ್ತ್ರದ ಅಭ್ಯಾಸವನ್ನು ಮಾಡುವದು ಲೇಸು. ಚರಕ, ಸುಶ್ರುತ ಗ್ರಂಥಗಳಲ್ಲಿ ಈ ವಿಷಯಗಳು ವರ್ಣಿಸಲ್ಪಟ್ಟಿವೆ. ಪಾಶ್ಚಿಮಾತ್ಯ ಶಾರೀರ ವರ್ಣನೆಯನ್ನು ಕ್ರಮಿಕ ಮತ್ತು ಹಳ್ಳಿಯ ವೈದ್ಯ ಪುಸ್ತಕಗಳಲ್ಲಿ ಸ್ವಲ್ಪವರಲ್ಲಿ ನೋಡಬಹುದು ಇಲ್ಲಿ ಆಯುರ್ವೇದೀಯರಿಗೆ ಮಾನ್ಯವಾದ ಶಾರೀರವರ್ಣನೆಯನ್ನಷ್ಟೇ ಸ್ಥೂಲಮಾನದಿಂದ ಕೊಡುವೆವು.

ಶರೀರಕ್ಕೆ ಕೈಕಾಲುಗಳೆಂಬ ನಾಲ್ಕು ಶಾಖೆಗಳೂ ಒಂದು ವಕ್ಷಕೋಷ್ಠಗಳನ್ನೊಳಗೊಂಡ ಮಧ್ಯಭಾಗವೂ ಮತ್ತು ಕೊರಳು ಸಮೇತ

ವಾದ ಶಿರಸ್ಸು ಹೀಗೆ ಆರು ಅಂಗಗಳು ಇರುತ್ತವೆ. ಮಸ್ತಕ, ಉದರ, ಮೊಲೆ, ಅಂಡ, ಕಣ್ಣು, ಮೂಗು, ಕಿವಿ ಮುಂತಾದವುಗಳನ್ನು ಪ್ರತ್ಯಂಗಗಳೆಂದು ಕರೆಯುವದುಂಟು. ಮಸ್ತಕಕ್ಕೆ ಎಂಟು ಮುಖಕ್ಕೆ ಹದಿನಾಲ್ಕು ಎಲಬುಗಳಿರುತ್ತವೆ.

ತಲೆಬುರುಡೆಯಲ್ಲಿ ಮಿದುಳು ಇರುತ್ತದೆ. ಕೋಷ್ಟದ ಮೇಲಿನ ಭಾಗದಲ್ಲಿ ಅಂದರೆ ವಕ್ಷಸ್ಥಳದಲ್ಲಿ ಫುಪ್ಪುಸ-ಹೃದಯಗಳಿರುತ್ತವೆ. ಈ ಭಾಗವು ಕರಡಿಗೆಯಂತಿದ್ದು, ಮುಂದೆ ವಕ್ಷಫಲಕವೂ ಹಿಂದೆ ಅಂಸಫಲಕ ಮತ್ತು ಬೆನ್ನೆಲುಬುಗಳೂ ಎಡಬಲಪಾರ್ಶ್ವಗಳಲ್ಲಿ ಪಕ್ಕೆಲುಬುಗಳೂ ಇರುವವು. ಉದರವು ಕೋಷ್ಟದ ಮಧ್ಯಭಾಗವು; ಇದರಲ್ಲಿ ಎಲ್ಲ ಪಚನೇಂದ್ರಿಯಗಳು ಅಂದರೆ ಜಠರ, ಗ್ರಹಣಿ, ಸ್ವಾದುಪಿಂಡ, ಲಘ್ವಂತ್ರ, ಬೃಹದಂತ್ರ, ಉಂಡುಕ ಮುಂತಾದವುಗಳಿರುತ್ತವೆ. ಇವುಗಳ ಹೊರತು ಬಲಕ್ಕೆಯಕೃತವೂ ಎಡಕ್ಕೆ ಪ್ಲಿಹವೂ, ನಾಭಿಯ ಹಿಂದೆ ಮೇರುದಂಡಕ್ಕೆ ಹತ್ತಿ ಎರಡೂ ಮಗ್ಗಲಿಗೆ ಎರಡು ವೃಕ್ಕ (ಮೂತ್ರಪಿಂಡ)ಗಳು ಇರುತ್ತವೆ.

ಉದರದ ಹಿಂದಿನ ಮಗ್ಗಲಿಗೆ ಮೇರುದಂಡವೂ ಎರಡೂ ಪಾರ್ಶ್ವಗಳಲ್ಲಿ ಪಕ್ಕೆಲುಬುಗಳ ಕೆಳಗಿನ ಭಾಗವೂ ಇರುತ್ತದೆ ಮುಂದೆ ಮಾತ್ರ ಎಲಬು ಇರದೆ ಆಂತ್ರಾವರಣವೂ ಮೇದಸ್ಸಿನ ಆಸ್ತರಣವೂ, ಪ್ರತಾನವತ್ ಸ್ನಾಯುಗಳೂ ಚರ್ಮವೂ ಇರುತ್ತವೆ. ಕೋಷ್ಟದ ಕೆಳಗಿನ ಭಾಗದಲ್ಲಿ ಜನನೇಂದ್ರಿಯಗಳೂ. ಶುಕ್ರಾಶಯವೂ, ಗರ್ಭಾಶಯವೂ, ಮಲಾಶಯವೂ, ಮೂತ್ರೇಂದ್ರಿಯಗಳೂ, ಮೂತ್ರಾಶಯವೂ ಇರುತ್ತವೆ. ಈ ಭಾಗದ ಹಿಂಬದಿಯಲ್ಲಿ ತ್ರಿಕಾಸ್ಥಿ, ಗುದಾಸ್ಥಿಗಳೂ ಎರಡೂ ಬದಿಗಳಲ್ಲಿ ಎರಡು ನಿತಂಬಾಸ್ಥಿಗಳೂ, ಇರುವವು ನಿತಂಬಾಸ್ಥಿಯ ಮುಂಭಾಗಗಳು ಮುಂದೆ ಹಬ್ಬಿ ಒಂದಕ್ಕೊಂದು ಅಂಟಿಕೊಂಡಿರುತ್ತವೆ ಇವು ಹೊಂದಿಕೊಂಡ ಭಾಗದ ಕೆಳಗೆ ಕಮಾನನಂತಿರುವ ಸ್ಥಳದಲ್ಲಿ ಅಂದರೆ ಭಗಾಸ್ಥಿಯ ಕೆಳಗೆ ಜನನೇಂದ್ರಿಯದ ಬಾಹ್ಯಭಾಗವಿರುತ್ತದೆ.

ಕೋಷ್ಟದ ಹಿಂಭಾಗದಲ್ಲಿ ಬೆನ್ನೆಲಬುಗಳ ಮಣಿಗಳಿಂದ ಕೂಡಿದ ಮೇರುದಂಡವಿರುತ್ತದೆ. ಬೆನ್ನೆಲಬಿನ ಮಣಿಗಳು ಒಂದರಮೇಲೊಂದು ರಚಿಸಲ್ಪಟ್ಟಿದ್ದರಿಂದ ಅವುಗಳ ಮಧ್ಯದಲ್ಲಿರುವ ಪೊಳ್ಳುಭಾಗಗಳು ನಲಿಕೆಯಾಕಾರವನ್ನು ಹೊಂದುತ್ತವೆ. ಈ ನಲಿಕೆಯಲ್ಲಿಯೇ ಸುಷುಮ್ನಾನಾಡಿಯು (ಕಶೇರುಕಾರಜ್ಜುವು) ಅಡಗಿಕೊಂಡಿರುತ್ತದೆ. ಮೇರುದಂಡವು ಕಪಾಲದ ಕೆಳತುದಿಗೆ ಆರಂಭವಾಗಿ ಗುದಾಸ್ಥಿಯವರೆಗೆ ಬೆಳೆದಿರುತ್ತದೆ. ಇದರಲ್ಲಿ ೨೬ ಎಲಬುಗಳ ಸಮುದಾಯವಿರುತ್ತದೆ ಸುಷುಮ್ನಾನಾಡಿಯು ಮಾತ್ರ ೧೮ ಇಂಚು ಉದ್ದವಿದ್ದು ಮೊದಲನೇ ಜಘನ ಕಶೇರುಕೆಯು ವರೆಗೆ ಸಾಗಿರುತ್ತದೆ. ಅವಯವಗಳ ಸುತ್ತುಮುತ್ತು ಪ್ರತಾನವತ್ ಸ್ನಾಯುಗಳು ಪಸರಿಸಿರುತ್ತವೆ. ಧಡಕ್ಕೆ ಬೆನ್ನಿನ ಆಧಾರವಿದ್ದಂತೆ ಊರ್ಧ್ವಾಧಃ ಶಾಖೆಗಳಿಗೂ ಗಡುತರವಾದ ಮತ್ತು ಉದ್ದವಾದ ಎಲಬುಗಳ ಆಧಾರವಿರುತ್ತದೆ.

ತೊಡೆಗೆ ೧ ಮೊಣಕಾಲಿಗೆ ೧ ಕಾಲಿಗೆ ೨ ಪಾದಕ್ಕೆ ೨೬ ಎಲಬುಗಳಿರುತ್ತವೆ. ಇದರಂತೆ ಬಾಹುವಿಗೆ ೧ ಕೈಗೆ ೨ ಹಸ್ತಕ್ಕೆ ೨೭ ಎಲಬುಗಳಿರುತ್ತವೆ. ಅಸ್ಥಿಪಂಜರದ ಸುತ್ತುಮುತ್ತು ಸ್ನಾಯು ಜಾಲದ ಬಂಧನವಿರುತ್ತದೆ. ಸ್ನಾಯುಗಳು ಮಾಂಸಧಾತುವಿನಿಂದ ರಚಿಸಲ್ಪಟ್ಟಿರುತ್ತವೆ. ಆದರಿಂದ ಅವು ಸಾಮರ್ಥ್ಯವುಳ್ಳವುಗಳಾಗಿ ಚಲನವಲನಕ್ಕೂ ಸಂರಕ್ಷಣ ಕಾರ್ಯಕ್ಕೂ ಉಪಯುಕ್ತವಾಗಿರುತ್ತವೆ.

ಎರಡು ಅಥವಾ ಎರಡಕ್ಕಿಂತ ಹೆಚ್ಚು ಎಲಬುಗಳು ಕೂಡುವ ಸ್ಥಳಕ್ಕೆ ಸಂಧಿ ಎನ್ನುತ್ತಾರೆ ಈ ಸಂಧಿಗಳು ಅಸ್ಥಿಬಂಧಗಳೆಂಬ ಶ್ವೇತರಜ್ಜುಗಳಿಂದ ಬಿಗಿಯಲ್ಪಟ್ಟಿವೆ ಈ ಸಂಧಿಗಳಲ್ಲಿ ಶ್ಲೇಷಕ ಎಂಬ ಕಫಮಯವಾದ ದ್ರವಪದಾರ್ಥವಿರುತ್ತದೆ. ಅದು ಎಲಬುಗಳ ಚಲನವಲನಕ್ಕೆ ಸೌಕರ್ಯವನ್ನುಂಟು ಮಾಡುತ್ತದೆ. ಸ್ನಾಯುಗಳ ನಡುನಡುವೆ ಮೇದಸ್ಸಿನ ಥರಗಳಿರುತ್ತವೆ.

# ಪಾಂಚಭೌತಿಕ ಶಾರೀರ

ಶರೀರಂನಾಮ ಚೇತನಾಧಿಷ್ಠಾನಭೂತಂ
ಪಂಚಮಹಾಭೂತವಿಕಾರಸಮುದಾಯತ್ಮಕಂ
ದೋಷಧಾತುಮಲಾಮೂಲಂ ಸದಾದೇಹಾಸ್ಯ ॥

(ಚರಕ)

**ಪಿಂಡಬ್ರಹ್ಮಾಂಡಗಳ ವಿಚಾರ:** .. ಭಾರತ ಭೂಮಿಯಲ್ಲಿ ಯಾವದೇ ಪ್ರಾಚೀನ ಶಾಸ್ತ್ರದ ಮೂಲತತ್ವಗಳನ್ನು ಚೆನ್ನಾಗಿ ಪರೀಕ್ಷಿಸಿದರೆ ಅವುಗಳಲ್ಲಿ ಸ್ವಭಾವ ಸಿದ್ಧತೆಯೂ ನಿಸರ್ಗ ನಿಯಮಾನುಸಾರವಾದ ಬಾಧ್ಯತೆಯೂ ಹಾಗೂ ಪ್ರಕೃತಿ ಪ್ರಪಂಚದಲ್ಲಿರುವ ಏಕವಾಕ್ಯತೆಯೂ ಕಂಡು ಬರುವವು. ಇದಕ್ಕೆ ಆಯುರ್ವೇದ ಶಾರೀರ ಶಾಸ್ತ್ರವು ಉತ್ತಮವಾದ ದೃಷ್ಟಾಂತವು. ಆರ್ಯವೈದ್ಯಕದಲ್ಲಿ ಸೋಮಸೂರ್ಯ ವಾಯು ದೇವತೆಗಳು ಯಾವ ಪ್ರಕಾರ ಅಖಿಲ ಬ್ರಹ್ಮಾಂಡವನ್ನು ಆಕರ್ಷಣ ಪೃಥಕ್ಕರಣ ವಿಸರ್ಜನ ಕ್ರಿಯೆಗಳಿಂದ ಧಾರಣ ಮಾಡುವವೋ, ಅದೇ ಪ್ರಕಾರ ಕಫ–ಪಿತ್ತ-ವಾತಗಳು ಮಾನವೀ ಶರೀರವನ್ನು ಧಾರಣ ಮಾಡುವವೆಂದು ವರ್ಣಿಸಿದ್ದಾರೆ. ವಾತ–ಪಿತ್ತ–ಕಫಗಳಿಗೆ ಶಕ್ತಿಯು ಪಂಚಮಹಾಭೂತಗಳಿಂದ ದೊರಕುವದು. ವಿಶ್ವದಲ್ಲಿಯ ಅಖಿಲ ಪದಾರ್ಥಗಳಲ್ಲಿ ಅವಸ್ಥಾಂತರವಾಗುತ್ತಿರುವಂತೆ ಈ ವಾತ–ಪಿತ್ತ–ಕಫಗಳೆಂಬ ತ್ರಿದೋಷ ದ್ರವ್ಯಗಳಲ್ಲಿ ಕೂಡ ಯಾವಾಗಲೂ ಒಂದು ಪ್ರಕಾರದ ಕ್ರಾಂತಿಯು ನಡೆದಿರುತ್ತದೆ.

**ಆತ್ಮನೇ ಆಧಾರ:** — ಈ ಕ್ರಾಂತಿಗೆ ಜೀವಾತ್ಮನೇ ಕಾರಣನು. ಪಂಚಮಹಾಭೂತಗಳು ಮತ್ತು ಅವುಗಳಿಂದ ವಿಕಾರಹೊಂದಿದ ತ್ರಿದೋಷಗಳು ಜೀವಾತ್ಮನ ಚಾಲನೆಯಿಂದಲೇ ತಮ್ಮ ತಮ್ಮ ಕಾರ್ಯಗಳನ್ನು ಮಾಡುವವು.

**ತ್ರಿದೋಷಗಳು:**— ತ್ರಿದೋಷಗಳು ಸೂಕ್ಷ್ಮ ಮತ್ತು ಜಡ ಸ್ಥಿತಿಗಳಲ್ಲಿಯೂ ಹಾಗೂ ವಿಕೃತ ಅವಿಕೃತ ಸ್ಥಿತಿಗಳಲ್ಲಿಯೂ ಶರೀರದಲ್ಲಿ

ವಾಸವಮಾಡುವವು. ಇವುಗಳ ಅಂಶಗಳು ಸೂಕ್ಷ್ಮಾವಯುವಭೂತ ಅವಸ್ಥೆಗಳಲ್ಲಿದ್ದು ಅಸಂಖ್ಯೇಯವಾಗಿರುತ್ತವೆ.

**ಗುಣಕರ್ಮ:—** ಯಾವತ್ತೂ ಪದಾರ್ಥಗಳಿಗೆ ಅಥವಾ ದ್ರವ್ಯಗಳಿಗೆ ಗುಣಕರ್ಮಗಳಿದ್ದಂತೆ ತ್ರಿದೋಷಗಳಿಗಾದರೂ ಇರುವವು. ವಾತಕ್ಕೆ, ವಾಯು ಆಕಾಶ ತತ್ವಗಳಿಂದ ರೂಕ್ಷ ಲಘು ಶೀತ ಖರ ಸೂಕ್ಷ್ಮ ಚಲಾದಿ ಗುಣಗಳು ಬರುವವು. ಶರೀರದಲ್ಲಿ ವಾಯುವು ತನ್ನ ಕಾರ್ಯವನ್ನು ಮಾಡುವಾಗ ಅದಕ್ಕೆ ಈ ಗುಣಗಳಿಂದ ವೈಶದ್ಯ ಲಾಘವ ಉತ್ಸಾಹ ಉಚ್ಛ್ವಾಸ ನಿಶ್ವಾಸ ಚೇಷ್ಟಾ ವೇಗ ಪ್ರವರ್ತನ ಮೊದಲಾದ ಕ್ರಿಯಾಸಾಮರ್ಥ್ಯಗಳು ದೊರಕುವವು.

ಪಿತ್ತಕ್ಕೆ ಆಗ್ನೇಯ ಮಹಾಭೂತದಿಂದ ತೀಕ್ಷ್ಣತ್ವ ಉಷ್ಣತೆ ಲಾಘವ ದ್ರವ ವಾಸನೆ ಸ್ನೇಹ ಮೊದಲಾದ ಗುಣಗಳು ದೊರಕುವವು. ಅದರಿಂದ ಪಿತ್ತ ಧಾತುವಿಗೆ ದಹನ, ಪಾಚನ, ದರ್ಶನ, ತಾಪನ, ಪ್ರಕಾಶನ, ಮೇಧಾ, ಶೌರ್ಯ, ಕ್ಷುತ್ ತೃಟ್, ರುಚಿ ಮೊದಲಾದ ಗುಣಗಳು ಸಂಪ್ರಾಪ್ತವಾಗುವವು.

ಕಫಕ್ಕೆ ಪೃಥಿವಿ ಜಲ ತತ್ವಗಳಿಂದ ಸ್ನಿಗ್ಧ, ಶೀತ, ಗುರು, ಮಂದ, ಶ್ಲಕ್ಷ್ಣ, ಮೃತ್ಸ್ನ, ಸ್ಥಿರ ಮೊದಲಾದ ಗುಣಗಳು ಬರುವವು. ಅದರಿಂದ ಕಫ ಧಾತುವಿನ ಸ್ಥೈರ್ಯ; ಸಂದಿಬಂಧ, ಧಾರಣ, ಪೂರಣ, ಪ್ರೀಣನ, ಜೀವನ, ಗರ್ಭೋತ್ಪಾದನ, ಅಧೋಗತಿಭಾವ ಮೊದಲಾದ ಕರ್ಮ ಪ್ರವೃತ್ತಿಗಳು ಪ್ರಾಪ್ತವಾಗುವವು.

ಈ ರೀತಿಯಿಂದ ಉತ್ಪತ್ತಿ ಹೊಂದಿದ ವಾತ-ಪಿತ್ತ-ಕಫಗಳು ಕ್ರಿಯಾ ಸಾಮರ್ಥ್ಯವುಳ್ಳ ದೇಹ ಸಂಭವಕ್ಕೆ ಕಾರಣಗಳಾಗಿರುವವೆಂದನ್ನಲಿಕ್ಕೆ ಅಡ್ಡಿಯಿಲ್ಲ.

ಯಾವ ಯಾವ ಆಶಯುಗಳಲ್ಲಿ ಧಾತುಗಳಲ್ಲಿ, ಮಲಗಳಲ್ಲಿ ಮತ್ತು ಉಪಧಾತುಗಳಲ್ಲಿ ವಾತ-ಪಿತ್ತ-ಕಫಗಳು ಅಂಶತ: ಆಶ್ರಯುಮಾಡಿಕೊಂಡಿರುತ್ತವೆಂಬದನ್ನು ಕೆಳಗಿನ ಪಟ್ಟಿಯ ಮೇಲಿಂದ ತಿಳಿಯುಬಹುದಾಗಿದೆ.

| ಸ್ಥಾನ ಆಶಯುಗಳು | ಪ್ರಧಾನ ಧಾತು |
|---|---|
| ನಾಲಿಗೆ | ಕಫಧಾತು |
| ಅನ್ನನಲಿಕೆ | ಕಫ |
| ಆಮಾಶಯು | ಕಫ ಪಿತ್ತ |
| ಗ್ರಹಣಿ | ಪಿತ್ತ |
| ಸಣ್ಣ ಕರಳು | ಪಿತ್ತ |
| ದೊಡ್ಡ ಕರಳು | ವಾತ |
| ಗುದ | ವಾತ |
| ಯಕೃತ | ಪಿತ್ತ |
| ಪ್ಲೀಹ | ಪಿತ್ತ |
| ಅಗ್ನ್ಯಾಶಯು | ಪಿತ್ತ |
| ಮೂತ್ರಪಿಂಡ | ಪಿತ್ತ ಕಫ |
| ಮೂತ್ರಾಶಯು | ಪಿತ್ತ ಕಫ |
| ಹೃದಯು | ಕಫ ಪಿತ್ತ |
| ಫುಪ್ಫುಸ | ಕಫ |
| ಅಸ್ಥಿಸಂಧಿ | ಕಫ |

| ಧಾತೂಪಧಾತುಗಳು | ಪ್ರಧಾನಧಾತು |
|---|---|
| ರಸ | ಕಫ |
| ರಕ್ತ | ಪಿತ್ತ |
| ಮಾಂಸ | ವಾತ ಕಫ |
| ಮೇದ | ಕಫ |
| ಅಸ್ಥಿ | ವಾತ-ಪಿತ್ತ-ಕಫ |
| ಮಜ್ಜಾ | ಕಫ |
| ಶುಕ್ರ | ಕಫ |
| ಶೋಣಿತ | ಪಿತ್ತ |
| ಆರ್ತವ | ಪಿತ್ತ |
| ಓಜ | ಕಫ |
| ಮೊಲೆಹಾಲು | ಕಫ |

| ಮಲಗಳು | ಪ್ರಧಾನಧಾತು |
|---|---|
| ಮಲ (ಪುರೀಷ) | ಕಫ |
| ಮೂತ್ರ | ಕಫ ಪಿತ್ತ |
| ಬೆವರು | ಪಿತ್ತ |

| ಜ್ಞಾನೇಂದ್ರಿಯಗಳು | ಪ್ರಧಾನಧಾತು |
|---|---|
| ತ್ವಚಾ | ಪಿತ್ತ ಕಫ |
| ಕಣ್ಣು | ಪಿತ್ತ |
| ಕಿವಿ | ವಾತ |
| ಮೂಗು | ಕಫ |
| ನಾಲಿಗೆ | ಕಫ |

ವಾತ-ಪಿತ್ತ-ಕಫ ಈ ಮೂರು ತ್ರಿಧಾತುಗಳು (ವಾಡಿಕೆಯಲ್ಲಿ ತ್ರಿದೋಷಗಳು) ಶರೀರದ ಪ್ರತಿಯೊಂದು ಅಂಗೋಪಾಂಗಗಳಲ್ಲಿ ಮತ್ತು ಸೂಕ್ಷ್ಮಪಿಂಡಗಳಲ್ಲಿ ಹೆಚ್ಚು ಕಡಿಮೆ ಪ್ರಮಾಣದಿಂದ ಇದ್ದೇ ಇರುತ್ತವೆ. ಪ್ರಾಕೃತ ಅಂದರೆ ಒಳ್ಳೇ ಸ್ಥಿತಿಯಲ್ಲಿರುವಾಗ ಅಣು ರೇಣುಗಳನ್ನಾಶ್ರಯಿಸಿದ ಈ ತ್ರಿದೋಷಗಳು ತಮ್ಮ ತಮ್ಮ ನಿಸರ್ಗದತ್ತ, ಪಾಂಚಭೌತಿಕ ಗುಣಾನುಸಾರವಾಗಿ ಕಾರ್ಯವನ್ನು ಮಾಡುವವು. ಈ ಕಾರ್ಯಗಳು ಒಮ್ಮೊಮ್ಮೆ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ರೀತಿಯಿಂದಲೂ ಏಕಮುಖವಾಗಿ ಮತ್ತು ಅನೇಕ ಮುಖವಾಗಿಯೂ ಜರುಗಿಸಲ್ಪಡುತ್ತವೆ. ತ್ರಿದೋಷಗಳು ಸತ್ವ, ರಜ, ತಮೋ ಗುಣಗಳಂತೆ "ಅನ್ಯೋನ್ಯಾಭಿಭವ ಆಶ್ರಯ ಜನನ ಮಿಥುನ ವೃತ್ತಯಶ್ಚಗುಣಾಃ" ಪರ್ಯಾಯದಿಂದ ಇರುತ್ತಿವೆಯೆಂದು ತಿಳಿದುಕೊಳ್ಳಬೇಕು. ಅವುಗಳ ಸಂಯೋಗವೇ ವಿಲಕ್ಷಣ ಪ್ರಕಾರದ್ದಿರುತ್ತದೆ. ಅವು ಒಂದರಲ್ಲೊಂದು ಪ್ರವಿಷ್ಟವಾಗಿ ಅಡಿಗಡಿಗೆ ಕಾರಣಾನುಸಾರವಾಗಿ ಕ್ಷಯವೃದ್ಧಿಯನ್ನು ಹೊಂದುತ್ತಿರುತ್ತವೆ ಒಂದರ ಆಕ್ರಮಣವು ಹೊತ್ತುಬಂದಂತೆ ಇನ್ನೊಂದರ ಮೇಲೆ ಸಂಭವಿಸುತ್ತದೆ. ಈ ಮೂರು ದೋಷಗಳಲ್ಲಿ ವಾತದ ಪ್ರಾಬಲ್ಯವು ಬಹಳ. ಪಿತ್ತ-ಕಫ ದೋಷಗಳನ್ನು ಪ್ರಸಂಗಾನುಸಾರವಾಗಿ ತಡೆಯುವವನ್ನೂ ಕ್ಷೋಭಿಸುವಧನ್ನೂ ಅಥವಾ ಸರಿಪಡಿಸುವದನ್ನೂ ಮಾಡಲು ಅದು ಸಮರ್ಥವಿರುತ್ತದೆ.

**ವ್ಯಾಧಿಃ**– ದೋಷಧಾತು ಮಲಗಳು ಅನ್ನ ಪಾನವಿಹಾರಾದಿಗಳಲ್ಲಿ ಅತಿಯೋಗ, ಹೀನಯೋಗ, ಮಿಥ್ಯಾಯೋಗಗಳಾಗುವದರಿಂದ ಆಯಾ ಅವಯವಗಳಲ್ಲಿ ರೋಗಗಳನ್ನುಂಟು ಮಾಡುತ್ತವೆ ಮೊದಲು ತ್ರಿದೋಷಗಳು ಕೆಟ್ಟು ಸಪ್ತಧಾತುಗಳನ್ನು ಕೆಡಿಸುತ್ತವೆ. ನಂತರ ದೋಷ ಧಾತುಗಳು ಕೂಡಿಕೊಂಡು ಮಲವನ್ನು ಕೆಡಿಸುತ್ತವೆ. ಮಲವು ವಿಕೃತವಾಯಿತೆಂದರೆ ಅದರ ಮಾರ್ಗಗಳು ಅವರುದ್ಧವಾಗಿ ಅದು ನಿಂತಲ್ಲೇ ನಿಲ್ಲುತ್ತದೆ.

ಹೀಗೆ ದೋಷ ಸಂಚಯವಾಗುವದರಿಂದ ರೋಗಗಳು ಉತ್ಪನ್ನವಾಗುತ್ತವೆ. ರಜೋಗುಣಿ ಮತ್ತು ತಾಮಸೀ ವೃತ್ತಿಯ ಮನುಷ್ಯರಲ್ಲಿ ಮಲಿನಾಹಾರ ಅಯುಕ್ತವಿಹಾರಾದಿಗಳಿಂದ ಉತ್ಪನ್ನವಾದ ಮಲಗಳು ಯಾವಾಗ ರಸರಕ್ತ ವಾಹಿನಿಗಳನ್ನೂ ಹಾಗೂ ಸಂಜ್ಞಾವಹವಾಹಿನಿಗಳನ್ನೂ ಆಕ್ರಮಿಸುವವು. ಆಗ್ಗೆ ಆಯಾ ಸ್ರೋತಸ್ಸುಗಳಲ್ಲಿ ವಿಕೃತಿಗಳುಂಟಾಗಿ ವ್ಯಾಧಿಗಳು ಪ್ರಕಟವಾಗುವವು.

**ನಿದಾನ:**-ಔಷಧವನ್ನು ಕೊಡುವ ಪೂರ್ವದಲ್ಲಿ ಇವೆಲ್ಲ ವಿಚಾರಗಳನ್ನು ಮನಸ್ಸಿನಲ್ಲಿ ತಂದು ಸ್ಥಾನ ದೋಷಗಳನ್ನು, ಕಂಡು ಹಿಡಿದು, ಯೋಜನೆಯನ್ನು ಮಾಡತಕ್ಕದ್ದು. ಇವಲ್ಲದೆ ದೋಷಗಳಲ್ಲಿ ಒಮ್ಮೊಮ್ಮೆ ಒಂದೇ ದೋಷವು ಪ್ರಧಾನವಾಗಿರಬಹುದು; ಒಮ್ಮೊಮ್ಮೆ ಎರಡು ದೋಷಗಳು ಒಮ್ಮೊಮ್ಮೆ ಮೂರು ದೋಷಗಳು ಪ್ರಧಾನವಿದ್ದದ್ದು ಕಂಡುಬರಬಹುದು. ದೋಷಗಳ ಸಮ ವೃದ್ಧಿ ಮತ್ತು ಕ್ಷೀಣ ಅವಸ್ಥೆಗಳನ್ನು ಎಣಿಸಿದರೆ ೬೩ ಆಗುವವು. ಕೆಲವೊಂದು ವೇಳೆ ದೋಷ ಪರೀಕ್ಷೆಯಾಗುವದಿಲ್ಲ. ಅಂಥಲ್ಲಿ ಲಕ್ಷಣಗಳನ್ನು ನೋಡಿ ಅವುಗಳ ಉಪಶಮನವಾಗುವಂತೆ ಮಾಡಬೇಕು.

ದೋಷಗಳು ಬೇರೆ ಬೇರೆ ಧಾತುಗಳ ಅಧಿಷ್ಠಾನಗಳಲ್ಲಿ ಸೇರುವದು ಶಕ್ಯವಿರುವದರಿಂದ, ಯಾವತ್ತೂ ಅಂಗೋಪಾಂಗಗಳ ವಿಚಾರವನ್ನು ಮಾಡುವದು ಅವಶ್ಯವಿದೆ. ರೋಗಿಯ ದೋಷವನ್ನು ನೋಡುವಂತೆ, ದೂಷ್ಯ (ಧಾತು) ಆಶಯ ಬಲಾಬಲ ಜಠರಾಗ್ನಿ ಬಲಕಾಲ ಪ್ರಕೃತಿ-ಮಾನ, ವಯಸ್ಸು, ಮನಸ್ಸಿನ ಸ್ಥಿತಿ ಹಾಗೂ ಅವನ ಸಹನ ಶಕ್ತಿ ಇವನ್ನೆಲ್ಲ ವಿಚಾರಿಸಿ ಚಿಕಿತ್ಸೆಯನ್ನು ಪ್ರಾರಂಭಿಸಬೇಕು.

ವ್ಯಾದಿ ಭೇಧಗಳನ್ನು ನೋಡುವಾಗ ಅವು ಸ್ವತಂತ್ರವೋ, ಪರತಂತ್ರವೋ, ಸಾಧ್ಯವೋ, ಕಷ್ಟಸಾಧ್ಯವೋ ಅಥವಾ ಅಸಾಧ್ಯವೋ

ಸೋಪದ್ರವವೋ, ನಿರುಪದ್ರವವೋ ನಿಜವೋ ಆಗುಂತಕವೋ ಎಂಬ ದನ್ನು ಆಲೋಚಿಸಿ ಚಿಕಿತ್ಸೆ ಮಾಡಬೇಕು.

ರೋಗಗಳ ಬಲಾಬಲ ವಿಚಾರವಾದರೂ ಬಹಳ ಮಹತ್ವವುಳ್ಳದ್ದಿ ರುತ್ತದೆ. ಅಲ್ಪ ದೋಷವಿದ್ದಾಗ ರೋಗಿಗಳಿಗೆ ಲಂಘನಾದಿಗಳನ್ನು ಮಾಡಿಸಿ ಕೇವಲ ಪಥ್ಯಾಹಾರವನ್ನು ಸೇವಿಸಲಿಕ್ಕೆ ಹೇಳಿದರೆ, ರೋಗವು ಉಪಶಮನ ಹೊಂದುವದು. ಚಿಕಿತ್ಸೆಯನ್ನು ಪ್ರಾರಂಭಿಸುವ ಮೊದಲು ದೋಷಗಳ ಸಂಚಯ ಪ್ರಕೋಪ ಪ್ರಸಾರ, ಸ್ಥಾನಸಂಶ್ರಯ ಪ್ರಾದು-ರ್ಭಾವ ಮತ್ತು ಭೇದಗಳನ್ನು ಪರೀಕ್ಷಿಸುವದು ಅವಶ್ಯವಿದೆ.

**ಸಂಚಯ:**— ಆಹಾರವನ್ನು ಮಿತಿಮೀರಿ ತಿನ್ನುವದರಿಂದ ಶಾರೀರಿಕ ಧಾತುಗಳಲ್ಲಿ ವಿಕೃತಿಯುಂಟಾಗುವದು. ಈ ವಿಕೃತಿಯನ್ನು ಸರಿಪಡಿಸಿಕೊಳ್ಳುವಷ್ಟು ಶಕ್ತಿಯು ಆ ಮನುಷ್ಯನಲ್ಲಿ ಇಲ್ಲದಿದ್ದರೆ, ಅವನ ಧಾತುಗಳಲ್ಲಿ ದೋಷ ಸಂಚಯವಾಗುವದು. ಅಂದರೆ ದೋಷಗಳು ಒತ್ತಟ್ಟಿಗೆ ಕಲೆಯುವವು.

**ಪ್ರಕೋಪ:**— ಈ ದೋಷ ಸಂಚಯವನ್ನು ತಡೆಯದೇ ಇದ್ದರೆ ಧಾತು ವಿಕೃತಿಯು ಹೆಚ್ಚಾಗಿ ದೋಷಗಳು ಪ್ರಕೋಪಗೊಳ್ಳುವವು. ಇಂಥಲ್ಲಿ ಯಾವ ಔಷಧವು ಕ್ಷೀಣವಾದ ಧಾತುವನ್ನು ವೃದ್ಧಿಗೊಳಿಸು ವದೋ, ಅಥವಾ ವೃದ್ಧವಾದ ಧಾತುವನ್ನು ಕ್ಷೀಣಿಸುವದೋ, ಅಂಥದನ್ನೇ ಉಪಯೋಗಿಸಬೇಕು. ಅಂದರೆ ಸಂಚಯವು ಅಷ್ಟಕ್ಕೇ ನಿಂತು ಪ್ರಕೋಪವು ಶಮನವಾಗುತ್ತದೆ.

**ಪ್ರಸಾರ:**— ವೈದ್ಯನು ಅಜ್ಞಾನ ಇಲ್ಲವೆ ಆಲಸ್ಯದ ಮೂಲಕ ಸಂಚಯ ಪ್ರಕೋಪಗಳನ್ನು ತಡೆಯದಿದ್ದರೆ ರೋಗವು ಪ್ರಸಾರವನ್ನು ಹೊಂದುವದು; ಅಂದರೆ ಹೆಚ್ಚಾಗುವದು. ಹೀಗಾದಲ್ಲಿ ವಮನ ವಿರೇಚನ ಮತ್ತು ಲಂಘನ-ಉಪಚಾರವನ್ನು ಕೈಕೊಳ್ಳಬೇಕು.

**ಸ್ಥಾನ ಸಂಶ್ರಯ:**— ಶರೀರವಲ್ಲಿ ಯಾವದೇ ಕಾರಣದಿಂದ ಆಗವಲ್ಲದೇಕೆ; ದೋಷಗಳು ಒಮ್ಮೆ ಸೇರಿದವೆಂದರೆ ಅವು ಅತ್ತಿತ್ತ ಅಡ್ಡಾಡಿ ತನುಗೆ ವಿರೋಧವಿಲ್ಲದ ಕ್ಷೀಣ ಸ್ಥಾನಗಳಲ್ಲಿ ಬೀಡು ಬಿಡುತ್ತವೆ; ಇದಕ್ಕೆ ಸ್ಥಾನ ಸಂಶ್ರಯವೆಂದೆನ್ನುತ್ತಾರೆ. ಇದನ್ನು ಹೊರದೂಡುವ ದಕ್ಕೆ ಸ್ಥಾನಿಕ ಉಪಾಯಗಳನ್ನು ಕೈಕೊಳ್ಳಬೇಕು. ದೋಷಗಳು ಶಾಖಾಗತವಾಗಿದ್ದರೆ, ಕೋಷ್ಟದಲ್ಲಿ ತರಲು ಪ್ರಯತ್ನಿಸಬೇಕು; ಅಂದರೆ ನಾಲ್ಕೂ ಕಡೆಗೆ ಪಸರಿಸಿದ ದೋಷಗಳನ್ನು, ರಕ್ತ ಪಥದಿಂದ ಹೊಟ್ಟೆಯ ಕಡೆಗೆ ಔಷಧದ ಪ್ರಯೋಗಗಳಿಂದ ಸಾಗಿಸಲು ಪ್ರಯತ್ನಿಸಬೇಕು.

ಪ್ರಾಯಶಃ ವಾತ ಪ್ರಾಬಲ್ಯದಿಂದ ಪಿತ್ತ-ಕಫ ದೋಷಗಳು ಕ್ಷುಬ್ಧ ವಾಗಿ ಚಾಂಚಲ್ಯವನ್ನು ಹೊಂದಿ ಶಾಖೆಗಳ ಕಡೆಗೆ ಅಂದರೆ ಕೈಕಾಲುಗಳ ಕಡೆಗೆ ತೆರಳುವವು ಇವನ್ನು ಸ್ವಸ್ಥಾನಕ್ಕೆ ಅಂದರೆ ಕೋಷ್ಟಕ್ಕೆ ತರ ಬೇಕಾದರೆ ವಾತ ವಿಕಾರವನ್ನು ಸರಿಪಡಿಸಬೇಕಾಗುತ್ತದೆ. ಈ ತರದ ವಾತಾನುಲೋಮನವನ್ನು ಮಾಡಲಿಕ್ಕೆ ಮೊದಲು ಸ್ನೇಹನ ಸ್ವೇದನ ಉಪಾಯಗಳನ್ನು ಕಲ್ಪಿಸಿ ಅನಂತರ ಬಸ್ತಿಯ ಉಪಯೋಗವನ್ನು ಮಾಡಬೇಕು. ಹೀಗೆ ಮಾಡುವದರಿಂದ ದೋಷಗಳು ಶಾಖೆಗಳನ್ನು ಬಿಟ್ಟು ಪುನಃ ಸ್ವಸ್ಥಾನಕ್ಕೆ ಬರುತ್ತವೆ. ಅನಂತರ ವಮನ ವಿರೇಚನಾ ದಿಗಳಿಂದ ಹೊರಬೀಳುವಂತೆ ಮಾಡಬೇಕು.

**ವ್ಯಕ್ತಿ:**- ಎಂದರೆ ಪ್ರಾದುರ್ಭಾವ ಅಥವಾ ಲಕ್ಷಣಗಳ ದರ್ಶನವು. ಯಾವದಾದರೊಂದು ಬೇನೆಯು ಮೈಯಲ್ಲಿ ಪ್ರವೇಶ ಮಾಡಿದನಂತರ ಅದು ಕೂಡಲೇ ಹೊರಬೀಳುವದಿಲ್ಲ. ಮೊದಲು ಒಂದು ತರದ ಆಮ ಎಂಬ ಮಲವು ಧಾತುಗಳಲ್ಲಿ ಉತ್ಪನ್ನವಾಗಿ ರಕ್ತದ್ವಾರದಿಂದ ಸಂಚರಿಸಿ, ಅನಂತರ ಯಾವದಾದರೊಂದು ಅಧಿಷ್ಠಾನವನ್ನು ಆಶ್ರಯಿಸಿ, ಅಲ್ಲಿರುವ ಆಶಯದ ಸ್ರೋತಸ್ಸುಗಳೊಳಗಿಂದ ಮಲರೂಪವಾಗಿ ಹೊರಗೆ ಬರುತ್ತದೆ. ಒಳಗಿಂದೊಳಗೆ ರಸಮಲ ಸಂಯೋಗದಿಂದ ಆಗುವ ಕ್ರಿಯೆಗಳ ಲಕ್ಷಣ

ಗಳಿಗೆ ಪೂರ್ವರೂಪವೆಂದೆನ್ನುತ್ತಾರೆ. ಅನಂತರ ಆಗುವ ಲಕ್ಷಣಗಳಿಗೆ ರೂಪ ಇಲ್ಲವೆ ವ್ಯಕ್ತಿ ಎಂದೆನ್ನುವದುಂಟು

ಆಯುರ್ವೇದದಲ್ಲಿ ನಿದಾನವೆಂದರೆ ಹೇತು ಲಕ್ಷಣಗಳ ಸಮು-ದಾಯ. ಈ ನಿದಾನವು ಐದು ವಿಧವಾಗಿ ವಿಭಾಗಿಸಲ್ಪಟ್ಟಿದೆ. ೧ ಹೇತು ೨ ಪೂರ್ವರೂಪ ೩ ರೂಪ ೪ ಉಪಶಯ ೫ ಸಂಪ್ರಾಪ್ತಿ. ಹೇತು ಇದರ ಅರ್ಥ ಧಾತು ವೈಷಮ್ಯ. (ಪಾಶ್ಚಿಮಾತ್ಯ ವೈದ್ಯಕದಲ್ಲಿ ಹೇತು ಎಂದರೆ ಕಾರಣ ಮೀಮಾಂಸೆ; ಮತ್ತು ಲಕ್ಷಣವೆಂದರೆ ಚಿಹ್ನ, ಶೋಥ-ವೇದನೆ ಜ್ವರ ಇಂಥವುಗಳು) ಉಪಶಯವನ್ನು ಸಾತ್ಮ್ಯಾರ್ಥದಲ್ಲಿ ಉಪಯೋಗಿಸುತ್ತಾರೆ. ಸಂಪ್ರಾಪ್ತಿ ಅಂದರೆ ರೋಗ ಸಂಭವದಲ್ಲಿ ಬೇಕಾಗುವ ಲಕ್ಷಣ ಪರಂಪರೆ. ಪೂರ್ವರೂಪ, ರೂಪಗಳ ಬಗ್ಗೆ ಈ ಮೊದಲೇ ಹೇಳಿರುತ್ತದೆ.

**ಭೇದ:**— ರೋಗ ಪ್ರತಿಕಾರವನ್ನು ಮಾಡದಿದ್ದರೆ ಅದು ಅನೇಕ ಮುಖದಿಂದ ಶರೀರದಲ್ಲಿ ಕಾಣಿಸಿಕೊಳ್ಳುತ್ತದೆ. ಮತ್ತು ಮುಂದೆ ಅದು ಅಸಾಧ್ಯವಾಗುವ ಸಂಭವವಿರುತ್ತದೆ. ರೋಗದ ಈ ಅವಸ್ಥೆಗೆ ಭೇದ ವೆಂದೆನ್ನುತ್ತಾರೆ. ರೋಗವು ಈ ಅವಸ್ಥೆಯನ್ನು ಮುಟ್ಟಿದ ಮೇಲೆ ಭಿನ್ನ ಭಿನ್ನ ಅವಸ್ಥೆಗಳಲ್ಲಿ ವ್ಯಕ್ತವಾಗಿ ಉಪದ್ರವಗಳನ್ನೂ ಅನುಬಂಧ ಗಳನ್ನೂ ತರುತ್ತದೆ. ಅದರಿಂದ ಉತ್ತಾನ ದೋಷವು ಗಂಭೀರವಾಗು ತ್ತದೆ. ಮತ್ತು ರೋಗಿಗೆ ಗುಣವಾಗಲಿಕ್ಕೆ ದೀರ್ಘಕಾಲವು ಹತ್ತುತ್ತದೆ. ಯಾಕಂದರೆ ವಿಕಾರಗಳು ಬೇರೆ ಬೇರೆ ಅವಸ್ಥೆಗಳನ್ನು ಹೊಂದಿದಂತೆ ಅವುಗಳ ಮೇಲಿನ ಔಷಧೋಪಚಾರದಲ್ಲಿಯಾದರೂ ಮಾರ್ಪಾಟು ಗಳನ್ನು ಮಾಡಬೇಕಾಗುತ್ತದೆ. ಉಪಚಾರ ಪದ್ಧತಿಗಳಲ್ಲಿ ಲಂಘನ ಬೃಂಹ್ವಣ, ರೂಕ್ಷಣ, ಸ್ನೇಹನ, ಸ್ವೇದನ, ಸ್ತಂಭನ ಎಂಬವು ಮುಖ್ಯ ವಾಗಿವೆ. ರೋಗಗಳ ಅವಸ್ಥಾಂತರಗಳು ತಿಳಿಯದ ಹೊರ್ತು ಉಪ-ಚಾರವನ್ನು ಕೈಕೊಳ್ಳುವದು ಶಕ್ಯವಾಗುವದಿಲ್ಲ.

ಆಯುರ್ವೇದದಲ್ಲಿ ಶಾರೀರಿಕ ಸ್ಥಿತಿಯನ್ನು ಕುರಿತು ವಿಚಾರ ಮಾಡಿದಂತೆ ಮಾನಸಿಕ ಸ್ಥಿತಿಯ ವಿಚಾರವನ್ನಾದರೂ ಮಾಡಿದ್ದಾರೆ. ಶರೀರ ಸ್ವಾಸ್ಥ್ಯಕ್ಕೂ ಮನಸ್ಸಿಗೂ ತೀರ ನಿಕಟ ಸಂಬಂಧವಿದೆ. ಆರ್ಯರ ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ ಕಲ್ಪನೆಗಳು ನಿಜವಾಗಿ ಮನನೀಯವಾಗಿವೆ. ಆರೋಗ್ಯ ರಕ್ಷಣೆಗೆ ಇವೆಲ್ಲ ವಿಚಾರಗಳು ಅವಶ್ಯವಾದವುಗಳೆಂದು ಹೇಳಲು ಕಾರಣವಿಲ್ಲ. ಪಾಶ್ಚಾತ್ಯರಿಗೆ ಈ ತರವ ಕಾರಣ ಮೀಮಾಂಸೆಯು ಇನ್ನೂ ಹೊಳೆದಿಲ್ಲವೆಂದೆನ್ನಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಯಾಕಂದರೆ ಆರ್ಯವೈದ್ಯರು ಮಾನಸಿಕ ರೋಗಗಳ ಮೇಲೆ ಹೇಳಿದಷ್ಟು ಚಿಕಿತ್ಸಾ ಯೋಗಗಳು ಇನ್ನಾವ ಪದ್ಧತಿಯಲ್ಲಿಯೂ ಇಲ್ಲ. ಇದಕ್ಕೆ ಮೂಲ ಕಾರಣವೇನಂದರೆ ಆರ್ಯವೈದ್ಯಕದಲ್ಲಿಯ ಚಿಕಿತ್ಸಾ ಪದ್ಧತಿಯು ಪ್ರತ್ಯಕ್ಷ ಅನುಮಾನ ಮತ್ತು ಆಪ್ತವಚನ ಈ ಮೂರು ಪ್ರಮಾಣಗಳ ವಿವೇಚನದ ಮೇಲೆ ಅವಲಂಬಿಸಿರುವದುಂಟು ಇದರಿಂದ ಸಂಪ್ರಾಪ್ತಿ ವಿಜ್ಞಾನದಲ್ಲಿ ಅವ್ಯಾಪ್ತಿ ದೋಷವು ಕಂಡುಬರಲಾರದು. ಪ್ರತ್ಯಕ್ಷವಾಗಿ ಪಂಚಜ್ಞಾನೇಂದ್ರಿಯಗಳ ದ್ವಾರಾ ರೋಗ ಪರೀಕ್ಷೆಯಾಗದಿದ್ದರೆ ಅನುಮಾನ ಆಪ್ತವಾಕ್ಯಗಳಿಂದ ಅರಿತುಕೊಳ್ಳಬೇಕು; ಅಥವಾ ರೋಗಿಯ ಸಾತ್ಮ್ಯಾಸಾತ್ಮ್ಯಗಳನ್ನು ಕಂಡುಹಿಡಿದು ರೋಗ ಪ್ರತಿಕಾರವನ್ನು ಮಾಡಬೇಕು.

## ಔಷಧಗಳ ಬಗ್ಗೆ ಕೆಲ ಸೂಚನೆ

೧ ಯಾವಾಗಲೂ ತಾಜಾ ಔಷಧಗಳನ್ನು ತೆಗೆದುಕೊಳ್ಳಬೇಕು.

೨. ವಿಡಂಗ, ಹಿಪ್ಪಲಿ, ಬೆಲ್ಲ, ಜೇನತುಪ್ಪ ಇವು ಮಾತ್ರ ಒಂದು ವರ್ಷ ಹಿಂದಿನವು (ಹಳೆಯವು) ಇರಬೇಕು.

೩. ಅಮೃತಬಳ್ಳಿ, ಕೊಡಸಿಗೆ, ಅಡಸಾಲ, ಬೂದಿಗುಂಬಳ, ಶತಾವರಿ, ಅಶ್ವಗಂಧಿ, ಗೊರಟಗೆ, ಬಡೇಸೋಪು, ಪ್ರಸಾರಣಿ ಇವುಗಳನ್ನು ಯಾವಾಗಲೂ ಹಸಿ ಇದ್ದವು- ಗಳನ್ನು ಉಪಯೋಗಿಸಬೇಕು.

೪. ಕಷಾಯದಲ್ಲಿ ವನಸ್ಪತಿ ಅಂಗವನ್ನು ಹೇಳಿದ್ದಿಲ್ಲವೆಂದರೆ ಅಂಥಲ್ಲಿ ವನಸ್ಪತಿಯ ಬೇರು ತೆಗೆದುಕೊಳ್ಳಬೇಕು.

## ಔಷಧ ತೆಗೆದುಕೊಳ್ಳುವ ವೇಳೆ

೧. ಔಷಧ ತೆಗೆದುಕೊಳ್ಳುವ ವೇಳೆಯನ್ನು ಹೇಳಿದ್ದಿಲ್ಲವೆಂದರೆ, ಅಂಥಲ್ಲಿ ಪ್ರಾಯಶಃ ಮುಂಜಾನೆ ಅಂತಾ ತಿಳಿದುಕೊಳ್ಳ ಬೇಕು

೨ ಸಾಮಾನ್ಯವಾಗಿ ರೇಚಕ ಔಷಧಗಳನ್ನು ಬೆಳಗಿನ ಜಾವದಲ್ಲಿ ತೆಗೆದುಕೊಳ್ಳಬೇಕು.

೩. ದೀಪನ, ಪಾಚನ ಔಷಧಗಳನ್ನು ಊಟದ ಮೊದಲು ತೆಗೆದುಕೊಳ್ಳಬೇಕು.

೪. ಭಸ್ಮ ರಸಾಯನ ಕಷಾಯಗಳನ್ನು ಊಟದ ಮೊದಲು ಹೊಟ್ಟೆ ಹಸಿದಾಗ ತೆಗೆದುಕೊಳ್ಳಬೇಕು.

೫. ಆಸವಾರಿಷ್ಟಗಳನ್ನು ಊಟದ ನಂತರ ತೆಗೆದುಕೊಳ್ಳುವದು.

೬. ಸಮಾನವಾಯು ಮಂದ ಇದ್ದಾಗ್ಗೆ ಔಷಧವನ್ನು ಊಟದ ಮಧ್ಯದಲ್ಲಿ ಇಲ್ಲವೆ ಊಟದ ನಂತರ ಕೂಡಲೇ ತೆಗೆದು ಕೊಳ್ಳಬೇಕು.

೭. ಊಟಕ್ಕೂ ಔಷಧಕ್ಕೂ ಸಾಮಾನ್ಯವಾಗಿ ಅರ್ಧತಾಸಿನ ಅಂತರ ಇರುವದು ನೆಟ್ಟಗೆ. ವಿಶಿಷ್ಟ ಪ್ರಸಂಗಳಲ್ಲಿ ವೈದ್ಯರ ಸಲಹೆಯಂತೆ ವರ್ತಿಸಬೇಕು.

## ಕಷಾಯದಲ್ಲಿ ಔಷಧಿ ದ್ರವ್ಯಗಳ ಪ್ರಮಾಣ

೧. ಔಷಧಿ ದ್ರವ್ಯಗಳ ಪ್ರಮಾಣಗಳನ್ನು ಹೇಳದೆ ಇದ್ದಲ್ಲಿ ಸಮ ಭಾಗವೆಂದು ತಿಳಿಯಬೇಕು.

ಕಷಾಯದ ಪ್ರಮಾಣ ೨-೩ ತೊಲೆ ಒಂದು ವೇಳೆಗೆ.

೨. ಸ್ವರಸದಮಾತ್ರೆ ೨ ತೊಲೆ ಆದರಲ್ಲಿ ಸಕ್ಕರೆ, ಜೇನತುಪ್ಪ, ಬೆಲ್ಲ ಹಾಕುವದಾದಲ್ಲಿ ಆರು ಮಾಸಿಯಷ್ಟು ಹಾಕುವದು.

೩. ಕಷಾಯದಲ್ಲಿ ಉಪಯೋಗಿಸತಕ್ಕ ದ್ರವ್ಯಗಳ ಒಟ್ಟು ತೂಕದ ಹದಿನಾರುಪಟ್ಟು ನೀರು ಕೂಡಿಸಿ ಮಂದಾಗ್ನಿಯ ಮೇಲೆ ಕುದಿಯಲು ಇಡಬೇಕು. ೧/೮ ಭಾಗ ಉಳಿಯಿತೆಂದರೆ ಇಳಿಸಿ ಇಡಬೇಕು. ಆರಿದನಂತರ ಸೋಸಿ ಆದರಲ್ಲಿ ಜೇನು ಅಥವಾ ಸಕ್ಕರೆ ಕೂಡಿಸಿ ಕುಡಿಯಲು ಕೊಡಬೇಕು. ಕಷಾಯ ಬಹಳ ಎನಿಸಿದರೆ ಆದರಲ್ಲಿ ಎರಡು ಭಾಗಮಾಡಿ ಬೆಳಿಗ್ಗೆ ಮತ್ತು ಸಾಯಂಕಾಲ ಕೊಡಬೇಕು. ವಾತ-ಪಿತ್ತ ಕಫ ವಿಕಾರಗಳಲ್ಲಿ ೧/೪ ೧/೮ ೧/೧೬ ಸಕ್ಕರೆಯನ್ನು ಕೂಡಿಸಬೇಕು. ಜೇನ ತುಪ್ಪವನ್ನು ೧/೧೬ ೧/೮ ೧/೪ ಕೂಡಿಸಬೇಕು. ಒಟ್ಟಿಗೆ ದೇಶ ಕಾಲ ವಯಸ್ಸು ಅಗ್ನಿ ಬಲ ಪ್ರಕೃತಿ ನೋಡಿಕೊಂಡು ಅನುಪಾನ, ಔಷಧಿ ಪ್ರಮಾಣ ಮೊದಲಾದವುಗಳನ್ನು ನಿಶ್ಚಯಿಸಬೇಕು.

## ಜ್ವರ

## ಡಾ|| ಸವಣೂರ ಅವರ ಯೋಗಗಳು

ಸರ್ವಸಾಮಾನ್ಯವಾಗಿ ಜ್ವರಬಂದ ಕೂಡಲೇ ಕೊಡಲು ಉತ್ತಮವಾದ ಪಾಚನ ಕಷಾಯ.

| | | | |
|---|---|---|---|
| ಸುಂಠಿ | ೧/೪ | ತೊಲಿ | ಇವುಗಳನ್ನು ಅವಡು ಸಬಡು ಜಜ್ಜಿ ೨೦ ತೊಲಿ ನೀರು ಹಾಕಿ ೧/೨ ಕಷಾಯ ಇಳಿಸಿ, ಸೋಸಿ ಕೊಡುವದು ದಿನಕ್ಕೆ ಎರಡು ಸಲ. |
| ಹವೀಜ | ೧/೪ | ,, | |
| ಗುಳ್ಳ | ೧/೪ | ,, | |
| ಹೆಗ್ಗುಳ | ೧/೪ | ,, | |
| ದೇವದ್ವಾರ | ೧/೪ | ,, | |

### ಚಳಿಜ್ವರ

ಚಳಿಹತ್ತುವಾಗ ೨—೪ ಗುಂಜಿ ಸಣ್ಣಹಿಪ್ಪಲೀಪುಡಿ ಜೇನುತುಪ್ಪದಲ್ಲಿ ಕೊಡುವದು.

### ಓಕರಿಕೆ ಇದ್ದರೆ

೧—೨ ಗುಂಜಿ ಶಂಖ ಭಸ್ಮವನ್ನು ೧೫—೨೦ ಹನಿ ಲಿಂಬೀರಸ ಸಕ್ಕರೆಯಲ್ಲಿ ಕೊಡುವದು.

### ತಲೆಶೂಲಿಗೆ

ಚಂದನ, ಕರ್ಪೂರ ತೆಯ್ದು ಹಣೆಗೆ ಹಚ್ಚುವದು. ಅವಶ್ಯವೆನಿಸಿದಲ್ಲಿ ಜಾಜೀಕಾಯಿ ಅಥವಾ ಅಫು ಕೂಡಿಸಿ ಹಚ್ಚಬೇಕು.

## ನೀರಡಿಕೆಗೆ

ಜೇಕಿನಗಡ್ಡೆ
ಕಲ್ಲುಸಕ್ಕರಿ
ರಕ್ತಚಂದನ
ಸುಂಠಿ
ಲಾವಂಚ
ನೆಲ್ಲೀಕಾಯಿ
ಕಲ್ಲು ಸಬ್ಬಸಗಿ

ಇವುಗಳನ್ನು ಪ್ರತ್ಯೇಕ ಎರಡು ಮಾಸಿ ತೆಗೆದುಕೊಂಡು ನಾಲ್ಕು ಕಪ್ಪು ನೀರಿನಲ್ಲಿಹಾಕಿ, ಕಷಾಯಕ್ಕೆ ಇಟ್ಟು ಎರಡುಕಪ್ಪು ಇಳಿಸಬೇಕು. ಪ್ರತಿ ಸಲ ೫ ತೊಲೆ ಕೊಡಬೇಕು.

## ಚಳಿಜ್ವರಕ್ಕೆ ಔಷಧಗಳು

| | | |
|---|---|---|
| ಅಮೃತಬಳ್ಳಿ | ೧/೪ | ತೊಲಿ |
| ಚಿರಾಯಿತ | ೧/೪ | ,, |
| ಬೇವಿನಒಳದೊಗಟೆ | ೧/೪ | ,, |
| ಸೋನಾಮುಖಿ | ೧/೪ | ,, |
| ಸುಂಠಿ | ೧/೮ | ,, |
| ಹವೀಜ | ೧/೪ | ,, |
| ಜೇಷ್ಟಮಧು | ೧/೪ | ,, |

ಇವುಗಳನ್ನು ಸ್ವಲ್ಪುಕುಟ್ಟಿ ಎರಡು ಕಪ್ಪು ನೀರಿನಲ್ಲಿ ಹಾಕಿ ೧/೨ ಕಷಾಯ ಇಳಿಸಿ ಸೋಸಿ ಜೇನು ಕೂಡಿಸಿ ತೆಗೆದುಕೊಳ್ಳುವದು. ದಿನಕ್ಕೆ ೨ ಸಲ.

೨. **ಮಹಾಸುದರ್ಶನ ಚೂರ್ಣ:**- ೨—೩ ಮಾಸಿ ತೆಗೆದು ಒಂದು ಕಪ್ಪಿನಲ್ಲಿ ಹಾಕಿ ಮೇಲೆ ಒಂದು ಪಾವು ಕಪ್ಪು ಬಿಸಿ ಬಿಸಿ ನೀರು ಅದರೊಳಗೆ ಹಾಕಿ, ರಾತ್ರಿ ಮಲಗುವಾಗ ಮುಚ್ಚಿ ಇಡಬೇಕು. ಬೆಳಿಗೆ ಅದನ್ನು ಸೋಸಿ ತುಸು ಸಕ್ಕರೆ ಅಥವಾ ಜೇನು ಬೆರೆಸಿ ತೆಗೆದುಕೊಳ್ಳ ಬೇಕು. ಇದರಂತೆ ಬೆಳಿಗ್ಗೆ ಹಾಕಿ ಇಟ್ಟದ್ದನ್ನು ರಾತ್ರಿ ತೆಗೆದುಕೊಳ್ಳ ಬೇಕು. ಏಳು ದಿವಸ ಇದರಂತೆ ಮಾಡಬೇಕು.

೩. ತ್ರಿಭುವನಕೀರ್ತಿ, ಮಹಾಜ್ವರಾಂಕುಶ, ಜ್ವರಾಂಕುಶ, ನಾರಾಯಣಜ್ವರಾಂಕುಶ, ಮಹಾಮೃತ್ಯುಂಜಯ, ಪಂಚವಕ್ತ್ರ ಇವುಗಳಲ್ಲಿ ಯಾವುದಾದರೊಂದು೧-೨ ಗುಂಜಿ ತೆಗೆದು ಅಲ್ಲದರಸ ಮತ್ತು ಜೇನಿನಲ್ಲಿ ತೆಗೆದುಕೊಳ್ಳುವದು; ದಿನಕ್ಕೆ ಎರಡು ಸಲ.

ಚಳಿಜ್ವರಕ್ಕೆ ಹೇಳಿದ ಔಷಧಗಳು ಮಲೇರಿಯಾಕ್ಕೆ ಗುಣಕಾರಿಯಾಗಿವೆ.

## ಮಲೇರಿಯಾದಿಂದುಂಟಾದ ಅಶಕ್ತತೆ

| | | | |
|---|---|---|---|
| ಸಿದ್ಧಲಕ್ಷ್ಮೀವಿಲಾಸ | ೧/೪ | ತೊಲಿ | ೪೮ ಪುಡಿಗಳು ಮುಂ. ೭ ಸಾ. ೫ಕ್ಕೆ ೧ ಪುಡಿ ಜೇನಿನಲ್ಲಿ ತೆಗೆದಕೊಳ್ಳುವದು. |
| ಅಮೃತಸತ್ವ | ೧/೪ | ,, | |

೨

| | | | |
|---|---|---|---|
| ಅಭ್ರಕ (೧೦೦) | ೧/೨ | ತೊಲಿ | ೨೪ ಪುಡಿಗಳು ಮು.೭ಕ್ಕೆ ಸಾ.೫ಕ್ಕೆ ಒಂದು ಪುಡಿ. ಪ್ರತಿಯೊಂದು ಪುಡಿಯಲ್ಲಿ ೨ ಗುಂಜಿ ಹಿಪ್ಪಲಿಚೂರ್ಣ ಕೂಡಿಸಿ ತೆಗೆದುಕೊಳ್ಳುವದು. |
| ಲೋಹಭಸ್ಮ | ೧/೪ | ,, | |
| ಪ್ರವಾಳ ಚ. ಪು. | ೧/೪ | ,, | |
| ಅಮೃತಸತ್ವ | ೧/೨ | ,, | |

೩

| | |
|---|---|
| ಲೋಹಾಸವ | ಪ್ರತ್ಯೇಕ ೧/೨ ಚಮಚೆ, ನೀರು ೩ ಚಮಚೆ ಕೂಡಿಸಿ ಎರಡೂ ಊಟದ ನಂತರ ತೆಗೆದುಕೊಳ್ಳುವದು. |
| ದ್ರಾಕ್ಷಾಸವ | |

## ನಿದ್ರಾನಾಶ ಮತ್ತು ಜ್ವರಾನಂತರ ಅಶಕ್ತತೆ

| | | | |
|---|---|---|---|
| ಅಭ್ರಕ (೧೦೦) | ೧/೮ | ತೊಲಿ | ೨೪ ಪುಡಿಗಳು ಮು. ೭ ಸಾ. ೫ಕ್ಕೆ ನೆಲ್ಲೀಪಾಕಿನಲ್ಲಿ ೧ ಪುಡಿ. ರಾತ್ರಿ ಮಲಗುವಾಗ ಹಾಲು ಸಕ್ಕರೆ ಕುಡಿಯುವದು. |
| ತಾಪ್ಯಾದಿಲೋಹ | ೧/೮ | ,, | |
| ಮೃಗಶೃಂಗ | ೧/೪ | ,, | |
| ಪ್ರವಾಳಚ, ಪು. | ೧/೪ | ,, | |

### ವಾತಜ್ವರ

೧. ತ್ರಿಕಟು, ಚಿರಾಯಿತ, ಅಳಲೇಕಾಯಿ, ಕಟಕರೋಣಿಗಳ ಕಷಾಯದಲ್ಲಿ ೧—೨ ಗುಂಜಿ ಸೈಂಧಲವಣ ಕೂಡಿಸಿ ಕೊಡಬೇಕು. ದಿನಕ್ಕೆ ಎರಡು ಸಲ.

೨. ತ್ರಿಭುವನಕೀರ್ತಿ ೧—೨ ಗುಂಜಿ, ಅಲ್ಲದರಸ ಜೇನಿನಲ್ಲಿ ಕೂಡಿಸಿ ತೆಗೆದುಕೊಳ್ಳಬೇಕು. ದಿನಕ್ಕೆ ಎರಡು ಸಲ.

೩. ಭೇದಿಯಾಗಿದ್ದಿಲ್ಲವೆಂದರೆ ತ್ರಿಫಳಾ, ತ್ರಿಕಟು, ತಿಗಡಿ ಸಮ ಭಾಗ ಕೂಡಿಸಿ ಬೆಲ್ಲದಲ್ಲಿ ಗುಳಿಗೆಮಾಡಿ ೧/೨ ದಿಂದ ೧ತೊಲಿ ಕೊಡುವದು. ಬಿಸಿನೀರಿನಗೂಡ.

### ಪಿತ್ತಜ್ವರ

೧. ಧಮಾಸಾ, ಕಲ್ಲುಸಬ್ಬಸಗಿ, ಜೇಕಿನಗಡ್ಡೆ, ಚಿರಾಯಿತ, ಕಟಕರೋಣಿಗಳ ಕಷಾಯವನ್ನು ದಿನಕ್ಕೆ ಎರಡು ಸಲ ಕೊಡುವದು.

೨. ಮನೂಕ, ಅಮೃತಬಳ್ಳಿ, ಜೇಕಿನಗಡ್ಡೆ, ಕಲ್ಲುಸಬ್ಬಸಗಿ, ಕಟಕರೋಣಿಗಳ ಕಷಾಯವನ್ನು ದಿನಕ್ಕೆ ಎರಡು ಸಲ ಕೊಡುವದು.

## ಕಫಜ್ವರ

೧. ಕಹಿಪಡವಲ, ಅಳಲೇಕಾಯಿ, ತಾರೀಕಾಯಿ, ಅಡಸಾಲ, ನೆಲ್ಲೀಚಟ್ಟು, ಕಟಕರೋಣಿ, ಕಚೋರ, ಅಮೃತಬಳ್ಳಿಗಳ ಕಷಾಯವನ್ನು ದಿನಕ್ಕೆ ಎರಡು ಸಲ ಜೇನುಕೂಡಿಸಿ ತೆಗೆದುಕೊಳ್ಳುವದು.

೨. ಧತ್ತೂರ, ತುಳಸಿ, ಅಲ್ಲದರಸಗಳ ಭಾವನೆಕೊಟ್ಟು ಸಿದ್ಧ ಮಾಡಿದ ತ್ರಿಭುವನಕೀರ್ತಿ ೧—೨ ಗುಂಜಿ ಅಲ್ಲದರಸ-ಜೇನುಗಳಲ್ಲಿ ದಿನಕ್ಕೆ ಎರಡು ಸಲ ಕೊಡುವದು.

೩. ಒಣಕೆಮ್ಮು ಇದ್ದಲ್ಲಿ ಲವಂಗಾದಿವಟಿಗಳನ್ನು ಕಲ್ಲುಸಕ್ಕರೆಯೊಡನೆ ಬಾಯಿಯಲ್ಲಿ ಹಿಡಿಯಬೇಕು.

೪. ಕಫವು ಹೊರಗೆ ಬರುತ್ತಿದ್ದಿಲ್ಲವೆಂದರೆ ಒಂದು ಗುಂಜಿ ರಸಸಿಂದೂರವನ್ನು ಜೇನಿನಲ್ಲಿ ಕೊಡಬೇಕು.

೫. ತರ್ಪಣತೈಲ ಅಥವಾ ನೀಲಗಿರಿ ಎಣ್ಣೆಯನ್ನು ಎದೆಗೆಹಚ್ಚಿ ಅಗಸೀ ಪೋಟೀಸಿನಿಂದ ಕಾಸುವದು.

## ವಾತ-ಪಿತ್ತಜ್ವರ

೧. ಅಳಲೇಕಾಯಿ, ಕಲ್ಲುಸಬ್ಬಸಗಿ, ಜೇಕಿನಗಡ್ಡೆ, ಚಿರಾಯಿತ, ಮತ್ತು ಶುಂಠಿ ಇವುಗಳ ಕಷಾಯವನ್ನು ದಿನಕ್ಕೆ ೨ ಸಲ ಕೊಡುವದು. ಇದಕ್ಕೆ ಪಂಚಭದ್ರ ಕಷಾಯವೆಂದೆನ್ನುತ್ತಾರೆ.

ಅಥವಾ

೨. ತ್ರಿಫಳಾ, ರಾಸ್ನಾ, ಕಕ್ಕೇಕಾಯಿತಿಳಿಲು, ಅಡಸಾಲ, ಶಿವನೀಬೇರು ಇವುಗಳ ಕಷಾಯವನ್ನು ದಿನದಲ್ಲಿ ೨ ಸಲ ಕೊಡುವದು.

೩

| | | |
|---|---|---|
| ಸೂತಶೇಖರ(ಸು.ಯು.) | ೧ ಗುಂಜಿ | ಒಂದು ಪುಡಿ ಬೆಳಗ್ಗೆ ನೆಲ್ಲೀಪಾಕಿ ಸಲ್ಲಿ ಕೊಡುವದು. |
| ಚಂದ್ರಕಲಾ | ೧ ,, | |
| ಪ್ರವಾಳ ಚ.ಪು. | ೧ ,, | |

## ವಾತ-ಕಫಜ್ವರ

೧. ಕಾಯಫಳ, ರೋಹಿಪತೃಣ, ಜೇಕಿನಗಡ್ಡೆ, ಹವೀಜ, ಕಾಕಡಶಿಂಗಿ, ಬಜೆ, ಸುಂಠಿ, ಅಳಲೇಕಾಯಿ, ಗಂಟುಭಾರಂಗಿ, ಕಲ್ಲು ಸಬ್ಬಸಗಿ, ದೇವದ್ವಾರಗಳ ಕಷಾಯವನ್ನು ದಿನಕ್ಕೆ ಎರಡು ಸಲ ಕೊಡುವದು.

೨. ಬದ್ಧಕೋಷ್ಟವಿದ್ದಲ್ಲಿ ಕಕ್ಕೇಕಾಯಿತಿಳಲು, ಅಳಲೇಕಾಯಿ, ಕಟಕರೋಣಿ, ಮೋಡಿ, ಜೇಕಿನಗಡ್ಡೆಗಳ ಕಷಾಯವನ್ನು ಕೊಡುವದು.

೩. ಪಕ್ಕಡಿಶೂಲಿ ದಮ್ಮು ಇದ್ದಲ್ಲಿ ಗುಳ್ಳ, ಅಮೃತಬಳ್ಳಿ, ಸುಂಠಿ ಪುಷ್ಕರಮೂಲಗಳ ಕಷಾಯ ಕೊಡಬೇಕು.

೪. ತ್ರಿಭುವನಕೀರ್ತಿ, ಅಲ್ಲದರಸ-ಜೇನುಗಳಲ್ಲಿ ಕೊಡುವದು.

## ಪಿತ್ತ-ಕಫಜ್ವರ

೧. ಅಮೃತಬಳ್ಳಿ, ಹವೀಜ, ರಕ್ತಚಂದನ, ಬೇವಿನಬಳ-ದೊಗಟೆ, ಪದ್ಮಕಾಷ್ಟ ಇವುಗಳ ಕಷಾಯವನ್ನು ಕೊಡುವದು.

೨. ತ್ರಿಭುವನಕೀರ್ತಿ ಅಥವಾ ಆನಂದಭೈರವ ೧-೨ ಗುಂಜಿ ಜೇನಿನೊಡನೆ ದಿನಕ್ಕೆ ಎರಡು ಸಲ.

೩. ಕಫದ ಸಲುವಾಗಿ ರಸಸಿಂದೂರ ಅಥವಾ ಪೂರ್ಣಚಂದ್ರೋದಯ ಒಂದು ಗುಂಜಿ ಜೇನಿನೊಡನೆ ಕೊಡುವದು.

೪. ಬಡಬಡಿಸುವದಿದ್ದರೆ ಸುವರ್ಣಯುಕ್ತ ಸೂತಶೇಖರ ೧ ಗುಂಜಿ ನೆಲ್ಲೀಪಾಕಿನಲ್ಲಿ ಕೊಡುವದು.

## ಕಫ-ವಾತ ಪ್ರಧಾನ ಜ್ವರ (ನ್ಯುಮೋನಿಯಾ)

೧. ಗಂಟುಭಾರಂಗಿ, ಅಮೃತಬಳ್ಳಿ, ಜೇಕಿನಗಡ್ಡೆ, ದೇವದ್ವಾರ ಅಡಸಾಲ, ಸುಂಠಿ, ಹಿಪ್ಪಲಿ, ಪುಷ್ಕರಮೂಲ ಇವುಗಳ ಕಷಾಯವನ್ನು ದಿನಕ್ಕೆ ೨-೩ ಸಲ ಕೊಡುವದು.

೨

| | | | |
|---|---|---|---|
| ಹೇಮಗರ್ಭ | ೩ | ಗುಂಜಿ | ೧೨ ಚೀಟಮಾಡುವದು ಪ್ರತಿದಿನ ಮುಂಜಾನೆ ೧ ಚೀಟು ಅಲ್ಲದರಸ-ಜೇನಿನೊಡನೆ. |
| ಪಂಚಸೂತ | ೬ | ,, | |
| ಸಮೀರಪನ್ನಗ | ೩ | ,, | |

೩. ತರ್ಪತೈಲ ಅಥವಾ ನೀಲಗಿರಿ ಎಣ್ಣೆ ಹಚ್ಚಿ ಎದೆ ಕಾಸುವದು

## ನ್ಯುಮೋನಿಯಾದಿಂದ ಅಶಕ್ತತೆ

| | | | |
|---|---|---|---|
| ಅಭ್ರಕ (೧೦೦) | ೮ | ತೊಲಿ | ೨೪ ಪುಡಿಗಳು ಮುಂಜಾನೆ ಒಕ್ಕೆ ಸಾಯಂಕಾಲ ಒಕ್ಕೆ ಒಂದು ಪುಡಿ ಜೇನಿನೊಡನೆ |
| ತಾಪ್ಯಾದಿಲೋಹ | ೮ | ,, | |
| ಸುವರ್ಣಮಾಕ್ಷಿಕ | ೮ | ,, | |
| ಪ್ರವಾಳಚಂಪು | ೮ | ,, | |
| ಅಶ್ವಗಂಧಾದಿಚೂರ್ಣ | ೧ | ,, | |

## ಸನ್ನಿಪಾತಜ್ವರ

೧. ಸನ್ನಿಪಾತ ಜ್ವರವೆಂದು ತಿಳಿದ ಕೂಡಲೇ ವಿಕೋಪಕ್ಕೆ ಹೋಗಬಾರದೆಂದು ಮೊದಲಿನಿಂದಲೇನೇ ರಸಸಿಂದೂರ, ಪೂರ್ಣ ಚಂದ್ರೋದಯ, ಹೇಮಗರ್ಭ, ಪಂಚಸೂತ, ಮಾತ್ರೆಗಳ ಪೈಕಿ ಯಾವ ದಾದರೊಂದನ್ನು ಪಾವು ಗುಂಜಿ ಪ್ರಮಾಣದಿಂದ ಅಲ್ಲದರಸ ಜೇನಿನಲ್ಲಿ ಮುಂಜಾಗ್ರತೆಗಾಗಿ ಕೊಡುವದು.

೨. ಕಾಯುಫಲ, ಪುಷ್ಕರಮೂಲ, ಕಾಕಡಶಿಂಗಿ, ಸುಂಠಿ, ಮೆಣಸು, ಹಿಪ್ಪಲಿ, ಧಮಸಾ, ಗಂಟುಭಾರಂಗಿ, ನೆಲಗುಳ್ಳಗಳ ಕಷಾಯ ದಲ್ಲಿ ಕಲ್ಲುಸಕ್ಕರೆ ಹಾಕಿ ಕೊಡಬೇಕು. ದಿನಕ್ಕೆ ೨-೩ ಸಲ

೩. ಗಂಟಲು ಒಣಗಿದರೆ ತ್ರಿಕಟು, ಸೈಂಧಲವಣಗಳ ಚೂರ್ಣ ವನ್ನು ನಾಲಿಗೆಗೆ ಹಚ್ಚಬೇಕು.

೪. ತಂದ್ರಾ ಅಂದರೆ ಮಬ್ಬು ಇದ್ದರೆ ಚೊಗಚೆತೊಪ್ಪಲ ರಸ ದಲ್ಲಿ ತ್ರಿಕಟು ತೆಯ್ದು ೨-೩ ಹನಿ ಮೂಗಿನಲ್ಲಿ ಬಿಡಬೇಕು.

## ಸನ್ನಿಪಾತದಲ್ಲಿ ಕೊಡಬಹುದಾದ ಮಹತ್ವದ ಕಷಾಯ

೧. **ಶಠ್ಯಾದಿ ಕಷಾಯ:**– ಕಚೋರ, ಪುಷ್ಕರಮೂಳ, ನೆಲ–ಗುಳ್ಳ, ಕಾಕಡಶಿಂಗಿ, ಧಮಸಾ, ಇಂದ್ರಜವಿ, ಕಹಿಪಡವಲ, ಕಟಕರೋಹಿಣಿ ಇವುಗಳ ಕಷಾಯಕ್ಕೆ ಶಠ್ಯಾದಿ ಕಷಾಯವೆಂದೆನ್ನುವರು

**ಅಥವಾ**

೨. ಅಳಲೇಕಾಯಿ, ಕಲ್ಲುಸಬ್ಬಸಗಿ, ಕಟಕರೋಣಿ, ದ್ರಾಕ್ಷ, ದೇವದಾರ, ಜೇಕಿನಗಹ್ಣೆ, ಚಿರಾಯತ, ಕಕ್ಕೇಕಾಯಿ, ನೆಲ್ಲೀಚಿಟ್ಟು, ಕಹಿಪಡವಲಗಳ ಕಷಾಯವನ್ನು ಕೊಡಬೇಕು.

೩. **ಬಾಯಿಂದ ರಕ್ತ ಬೀಳುತ್ತಿದ್ದರೆ:-** ಪದ್ಮಕಾಷ್ಟ, ರಕ್ತ-ಚಂದನ, ಜೇಕಿನಗಡ್ಡೆ, ಕಲ್ಲುಸಬ್ಬಸಗಿ, ತ್ರಿಫಳಾ, ಜೇಷ್ಟಮಧು, ಬಾಳದಬೇರು, ಬೇವಿನಬಳದೊಗಟೆಗಳ ಕಷಾಯವನ್ನು ಕೊಡಬೇಕು.

## ಸನ್ನಿಪಾತದಲ್ಲಿ ಕೊಡಬಹುದಾದ ರಸಾಯನಗಳು

ತ್ರಿಭುವನಕೀರ್ತಿ, ಪಂಚವಕ್ತ್ರ, ಹೇಮಗರ್ಭ, ಪಂಚಸೂತ, ಸಮೀರಪನ್ನಗ, ಮಲ್ಲಸಿಂದೂರ, ಮಹಾವಾತವಿಧ್ವಂಸಗಳಲ್ಲಿ ಯಾವ ದಾವರೊಂದನ್ನು ದೋಷಕ್ಕೆ ಅನುಗುಣವಾಗಿ ಉಪಯೋಗಿಸಬೇಕು.

## ಸಣ್ಣಜ್ವರ

೧

| | | | |
|---|---|---|---|
| ಲಕ್ಷ್ಮೀನಾರಾಯಣ | ½ | ತೊಲಿ | ೨೪ ಪುಡಿಗಳು ಮುಂಜಾನೆ ೭ಕ್ಕೆ ಸಾಯಂಕಾಲ ೫ಕ್ಕೆ ಒಂದು ಪುಡಿ ತುಲಸಿರಸ+ಜೇನು. |
| ಪ್ರವಾಳಚ. ಪು. | ½ | ,, | |
| ಅಮೃತಸತ್ವ | ,, | ,, | |

೨

ಚಿರಾಯಿತದ ಕಡ್ಡಿಗಳನ್ನು ½ ತೊಲಿಯಷ್ಟು ಸ್ವಲ್ಪ ಜಜ್ಜಿ ರಾತ್ರಿ ಮಲಗುವಾಗ ಅರ್ಧಕಪ್ಪು ಬಿಸಿ ಬಿಸಿ ನೀರಿನಲ್ಲಿ ನೆನೆಯಿಟ್ಟು ಬೆಳಗಾದ ನಂತರ ಸೋಸಿ ಜೇನು ಕೂಡಿಸಿ ಕುಡಿಯುವದು. ಒಂದು ಸಪ್ತಕ ಮಾಡುವದು.

## ಜ್ವರಾನಂತರ ಮಾಂಸ ಕ್ಷೀಣತೆ

೧

| | | | |
|---|---|---|---|
| ಮಧುಮಾಲಿನಿ ವಸಂತ | ೧ | ತೊಲಿ | ೨೪ ಪುಡಿಗಳು ಮುಂಜಾನೆ ಒಕ್ಕೆ ಸಾಯಂಕಾಲ ಒಕ್ಕೆ ಒಂದು ಪುಡಿ ಜೇನಿನೊಡನೆ. |
| ಸುವರ್ಣಮಾಲಿನೀವಸಂತ | ೧ | ,, | |
| ಪ್ರವಾಳ ಚ. ಪು. | ೧ | ,, | |
| ಹಿಪ್ಪಲಿ | ,, | ,, | |
| ಅಮೃತಸತ್ವ | ೩ | ,, | |

೨

| | |
|---|---|
| ಅಮೃತಾರಿಷ್ಟ<br>ದ್ರಾಕ್ಷಾರಿಷ್ಟ | ಪ್ರತ್ಯೇಕ ೧॥ ಚಮಚೆ, ನೀರು ಆರು ಚಮಚೆ ಕೂಡಿಸಿ ಎರಡೂ ಊಟದನಂತರ. |

## ಜ್ವರದನಂತರ ಅಶಕ್ತತೆ

ಲಘುಮಾಲನೀವಸಂತ, ಸುವರ್ಣಮಾಲಿನೀವಸಂತ, ಆರೋಗ್ಯ-ವರ್ಧಿನಿ, ಲೋಹ, ಸುವರ್ಣಮಾಕ್ಷಿಕ ಇವುಗಳಲ್ಲಿ ಯಾವುದಾದ-ರೊಂದನ್ನು ಪ್ರಕೃತಿಗನುಸರಿಸಿ ನೋಡಿ ತೆಗೆದು ಆದರಲ್ಲಿ ಪ್ರವಾಳ, ಅಮೃತಸತ್ವ, ಸಿತೋಪಲಾದಿ, ಕೂಡಿಸಿ ಜೇನಿನಲ್ಲಿ ತೆಗೆದುಕೊಳ್ಳುವದು.

## ಯಕೃತದ ಮಂದಕ್ರಿಯೆ

೧

| | | | |
|---|---|---|---|
| ಸೂತಶೇಖರ(ಸು. ಯು) | ೧½ | ತೊ. | ೨೪ ಪುಡಿಗಳು ಮುಂಜಾನೆ ಒಕ್ಕೆ ಸಾಯಂಕಾಲ ಒಕ್ಕೆ ಒಂದುಪುಡಿ ಜೇನಿನೊಡನೆ. |
| ಸುವರ್ಣಮಾಕ್ಷಿಕ | ೩ | ,, | |
| ಪ್ರವಾಳ ಚ. ಪು. | ೩ | ,, | |

೨

| | |
|---|---|
| ಕುಮಾರಿ ಆಸವ ನಂ. ೧<br>ಪುನರ್ನವಾಸವ | ಪ್ರತ್ಯೇಕ ೧ ಚಮುಚೆ, ನೀರು ೪ ಚಮುಚೆ ಪ್ರತಿ ಊಟದನಂತರ. |

## ಅಗ್ನಿಮಾಂದ್ಯ

೧

| | | | |
|---|---|---|---|
| ಯಾಲಕ್ಕಿ | ೧ | ಗುಂಜಿ | ಏಳು ಪುಡಿಗಳನ್ನು ಮಾಡುವದು. ಮುಂಜಾನೆ ೭ಕ್ಕೆ ಸಾಯಂಕಾಲ ೭ಕ್ಕೆ ಒಂದು ಪುಡಿ ಜೇನಿನೊಡನೆ. |
| ದಾಲಚಿನ್ನಿ | ೧ | ,, | |
| ನಾಗಕೇಶರ | ೧ | ,, | |
| ತಮಾಲಪತ್ರ | ೧ | ,, | |
| ಅಗ್ನಿಸೂತ | ೪ | ತೊಲಿ | |

೨

| | | | |
|---|---|---|---|
| ಚತುರ್ಮುಖ | ೧೬ | ತೊಲಿ | ೧೬ ಪುಡಿಗಳು, ಮುಂಜಾನೆ ೧೦ಕ್ಕೆ ಸಾಯಂಕಾಲ ೪ ಕ್ಕೆ ಒಂದುಪುಡಿ ಜೇನಿನೊಡನೆ. |
| ಚೌಸಷ್ಟ ಹಿಪ್ಪಲಿ | ೪ | ,, | |

**ಅಥವಾ**

೧

| | | | |
|---|---|---|---|
| ಆರೋಗ್ಯವರ್ಧಿನಿ | ೪ | ತೊಲಿ | ೧೬ ಪುಡಿಗಳು ಊಟದ ಮೊದಲು ೧ ಪುಡಿ, ಕಾಡಿಗ್ಗರಗಿನರಸ+ಜೇನು |
| ಸೂತಶೇಖರ(ಸು ಯು.) | ೧೬ | ,, | |
| ಪ್ರವಾಳ ಚ. ಪು. | ೪ | ,, | |
| ಅಮೃತಸತ್ವ | ,, | ,, | |

೨

| | | | |
|---|---|---|---|
| ಅಗ್ನಿಸೂತ | ೧/೮ | ತೊಲಿ | ೧೬ ಪುಡಿಗಳು ಎರಡೂ ಊಟದ |
| ಆಮಲಕಿಚೂರ್ಣ | ೧ | ,, | ನಂತರ ೧ ಪುಡಿ ಜೇನಿನೊಡನೆ |

೩

ಅವಶ್ಯವೆನಿಸಿದಲ್ಲಿ ಮಲಗುವಾಗ ಸಾರಕಚೂರ್ಣವನ್ನು ತೆಗೆದು ಕೊಳ್ಳಬೇಕು.

## ಜೀರ್ಣ ಆಮಾಂಶ ಮತ್ತು ಅಗ್ನಿಮಾಂದ್ಯ

| | | | |
|---|---|---|---|
| ಸುವರ್ಣಮಾಲಿನೀವಸಂತ | ೧/೪ | ತೊಲಿ | ೨೪ ಪುಡಿಗಳು, ಮುಂಜಾನೆ ೬ಕ್ಕೆ |
| ರಾಜವಲ್ಲಭ | ,, | ,, | ಸಾಯಂಕಾಲ ೬ಕ್ಕೆ ಒಂದು ಪುಡಿ |
| ವಂಗಭಸ್ಮ | ,, | ,, | ದಾಳಿಂಬರ ಪಾಕಿನಲ್ಲಿ. |

## ಅಗ್ನಿಮಾಂದ್ಯ ಮತ್ತು ಬದ್ಧಕೋಷ್ಟ

೧

| | | | |
|---|---|---|---|
| ಆರೋಗ್ಯವರ್ಧಿನಿ | ೧/೮ | ತೊಲಿ | ೧೬ ಪುಡಿಗಳು, ಮುಂಜನೆ ೬ಕ್ಕೆ |
| ಪ್ರವಾಳ ಚ. ಪು. | ,, | ,, | ಸಾಯಂಕಾಲ ೫ಕ್ಕೆ ಒಂದು ಪುಡಿ |
| ಅಮೃತಸತ್ವ | ,, | ,, | ಕಾಡಿಗ್ಗರಗಿನರಸ+ಜೇನು. |

೨

| | | | |
|---|---|---|---|
| ಅಗ್ನಿಸೂತ | ೧/೮ | ತೊಲಿ | ೧೨ ಪುಡಿಗಳು, ಊಟದ ಮೊದಲು |
| ಶಂಖಭಸ್ಮ | ,, | ,, | ಒಂದು ಪುಡಿ ಲಿಂಬೀರಸ+ಸಕ್ಕರೆ |

೩

ಆರೋಗ್ಯಮಿಶ್ರಣ ೧॥ ಚಮಚೆ, ನೀರು ೩ ಚಮಚೆ ಎರಡೂ ಊಟದ ನಂತರ.

## ಅಪಚನ ಮತ್ತು ಸರ್ವಾಂಗಶೂಲಿ

| | | |
|---|---|---|
| ಮಹಾವಾತವಿಧ್ವಂಸ | ೧/೪ ತೊಲಿ | ೨೪ ಪುಡಿಗಳು ಮುಂಜಾನೆ ೭ಕ್ಕೆ ಸಾಯಂಕಾಲ ೫ಕ್ಕೆ ಒಂದು ಪುಡಿ ತುಪ್ಪ+ಜೇನು. |
| ಹೇಮಗರ್ಭ | ೩ ಗುಂಜಿ | |
| ಕಪರ್ದಿಕ | ೧/೪ ತೊಲಿ | |

## ಅಪಚನ ಮತ್ತು ಕ್ಷೀಣತೆ

೧

| | | |
|---|---|---|
| ಸುವರ್ಣಮಾಲಿನೀವಸಂತ | ೧/೪ ತೊಲಿ | ೧೬ ಪುಡಿಗಳು ೧ ಪುಡಿ ಬೆಳಿಗ್ಗೆ ಜೇನಿನೊಡನೆ. |
| ಪ್ರವಾಳ ಚ. ಪು. | ,, ,, | |
| ಅಮೃತಸತ್ವ | ೧/೪ ,, | |

೨

| | |
|---|---|
| ಕುಮಾರಿಆಸವ ನಂ. ೧ | ಪ್ರತ್ಯೇಕ ೧॥ ಚಮಚೆ, ನೀರು ೩ ಚಮಚೆ ಎರಡೂ ಊಟದ ನಂತರ |
| ಪಿಪ್ಪಲ್ಯಾಸವ | |

## ಜೀರ್ಣ ಅಗ್ನಿಮಾಂದ್ಯ

### ೧

| | | | |
|---|---|---|---|
| ಮಧುಮಾಲಿನೀವಸಂತ | ೧/೪ | ತೊಲಿ | ೨೪ ಪುಡಿಗಳು, ಮುಂಜಾನೆ ೬ಕ್ಕೆ ರಾತ್ರಿ ೬ಕ್ಕೆ ೧ ಪುಡಿ ಜೇನಿನೊಡನೆ |
| ಪ್ರವಾಳ ಚ. ಪು. | ,, | ,, | |
| ಸುವರ್ಣಮಾಕ್ಷಿಕ | ೧/೮ | ,, | |
| ಅಮೃತಸತ್ವ | ೧/೩ | ,, | |

### ೨

| | | | |
|---|---|---|---|
| ಅಶೋಕಚಕ್ಕೆ | ೧/೪ | ತೊಲಿ | ಅಷ್ಟಮಾಂಶ ಕಷಾಯ ಮುಂಜಾನೆ ಒಂದು ಸಲ ತೆಗೆದುಕೊಳ್ಳುವದು. |
| ನೀಲಕಮಲ | ,, | ,, | |
| ಅನಂತಮೂಲ | ,, | ,, | |
| ಪದ್ಮಕಾಷ್ಟ | ,, | ,, | |
| ಜೇಷ್ಟಮಧು | ,, | ,, | |

## ಅತಿಸಾರ

### ೧

| | | | |
|---|---|---|---|
| ಪ್ರವಾಳಪಂಚಾಮೃತ (ಮು. ಯು.) | ೧/೩ | ತೊಲಿ | ೧೨ ಪುಡಿಗಳು, ಮುಂಜಾನೆ ೭ಕ್ಕೆ ಸಾಯಕಾಲ ೭ ಕ್ಕೆ ಒಂದು ಪುಡಿ ಜೇನಿನೊಡನೆ. |
| ಜಾತಿಫಲಾದಿಚೂರ್ಣ | ೧ | ,, | |

# ಜೀರ್ಣ ಆಮಾತಿಸಾರ

## ೧

| | | | |
|---|---|---|---|
| ಅಭ್ರಕ (೧೮೦) | ೧/೮ | ತೊಲಿ | ೪೮ ಪುಡಿಗಳು, ಮುಂಜಾನೆ ಒಕ್ಕೆ ಸಂಜೆಯು ಇಕ್ಕೆ ಕುಟಜಾವಲೇಹದೊಡನೆ ಒಂದು ಪುಡಿ. |
| ಮೌಕ್ತಿಕ | ,, | ,, | |
| ಸುವರ್ಣಪರ್ಪಟಿ | ೧/೧೬ | ,, | |
| ಪ್ರವಾಳ ಚ. ಪು. | ೧/೪ | ,, | |
| ಅಮೃತಸತ್ವ | ೧/೪ | ,, | |

## ೨

| | | | |
|---|---|---|---|
| ಪಂಚಾಮೃತಪರ್ಪಟಿ | ೧/೮ | ತೊಲಿ | ೧೨ ಪುಡಿಗಳು, ಮುಂಜಾನೆ ಒಕ್ಕೆ ಸಾಯಂಕಾಲ ಇಕ್ಕೆ ಒಂದು ಪುಡಿ ದಾಳಿಂಬರ ಪಾಕಿನಲ್ಲಿ |
| ಸೂತಶೇಖರ(ಸು. ಯು.) | ,, | ,, | |
| ಚಂದ್ರಕಲಾ | ೧/೧೬ | ,, | |

## ೩

| | | | |
|---|---|---|---|
| ಚಂದ್ರಕಲಾ | ೧/೧೬ | ತೊಲಿ | ೧೨ ಪುಡಿಗಳು, ಮುಂಜಾನೆ ಒಕ್ಕೆ ಸಾಯಂಕಾಲ ಇಕ್ಕೆ ಒಂದು ಪುಡಿ ದಾಳಿಂಬರ ಪಾಕದಲ್ಲಿ |
| ಪಂಚಾಮೃತಪರ್ಪಟಿ | ೧/೮ | ,, | |
| ಸೂತಶೇಖರ(ಸು. ಯು. | ೧/೧೬ | ,, | |
| ಸುವರ್ಣಪರ್ಪಟಿ | ,, | ,, | |

## ೪

| | | | |
|---|---|---|---|
| ಚಂದ್ರಕಲಾ | ೧/೮ | ತೊಲಿ | ೧೨ ಪುಡಿಗಳು, ಮುಂಜಾನೆ ಒಕ್ಕೆ ಸಾಯಂಕಾಲ ಇಕ್ಕೆ ಒಂದು ಪುಡಿ ತುಲಸೀರಸ+ಜೇನು |
| ರಾಜವಲ್ಲಭ | ,, | ,, | |
| ಪ್ರವಾಳ | ,, | ,, | |
| ಮೌಕ್ತಿಕ | ,, | ,, | |

೫

ಸುವರ್ಣಪರ್ಪಟಿ ೧/೪ ತೊಲಿ
ಪ್ರವಾಳಪಂಚಾಮೃತ
(ಮು. ಯು.) ,, ,,
ಧಾತ್ರಿರಸಕ್ರಿಯಾ ೧/೩ ,,
(ನೆಲ್ಲೀಕಾಯಿ ರಸ ಒಣಗಿಸಿದ್ದು)

೨೪ ಪುಡಿಗಳು, ಮುಂಜಾನೆ ೭ಕ್ಕೆ ಸಾಯಂಕಾಲ ೫ಕ್ಕೆ ಒಂದು ಪುಡಿ ಕಲ್ಲುಸಕ್ಕರೆ ಪಾಕಿನಲ್ಲಿ.

೬

ಅಗ್ನಿಸೂತ ೧/೮ ತೊಲಿ
ಪ್ರವಾಳ ಚ. ಪು. ೧/೪ ,,
ಶಂಖಭಸ್ಮ ,, ,,

೧೬ ಪುಡಿಗಳು, ಊಟದ ಮಧ್ಯದಲ್ಲಿ ೧ ಪುಡಿಯನ್ನು ತೆಗೆದುಕೊಳ್ಳುವದು. ತುಪ್ಪದೊಡನೆ ೨ ವೇಳೆ.

೭

ಪಂಚಾಮೃತಪರ್ಪಟಿ ೧೬ ತೊಲಿ
ಪ್ರವಾಳಪಂಚಾಮೃತ ೧/೮ ,,
ಮಹಾಲವಂಗಾದಿಚೂರ್ಣ ೧/೩ ,,

೧೨ ಪುಡಿಗಳು, ಮುಂಜಾನೆ ೭ಕ್ಕೆ ಸಾಯಂಕಾಲ ೫ಕ್ಕೆ ಒಂದು ಪುಡಿ ನೆಲ್ಲೀಪಾಕಿನಲ್ಲಿ.

ಈ ಯೋಗಗಳಲ್ಲಿ] ಯಾವದಾದರೊಂದನ್ನು ತೆಗೆದುಕೊಳ್ಳುವದು. ಮತ್ತು,

೮

ಕುಟಜಾರಿಷ್ಟ
Bismuth Et, Pepsin Co.

ಊಟದ ನಂತರ ಪ್ರತ್ಯೇಕ ಒಂದು ಚಮಚೆ, ಎರಡು ಚಮಚೆ ನೀರು ಕೂಡಿಸಿ ತೆಗೆದುಕೊಳ್ಳುವದು.

